CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಅಕ್ಟೋಬರ್ ೬, ೨೦೦೫ (ಆಶ್ವಯುಜ ೧೪ ಶಕ ವರ್ಷ ೧೯೨೭) | ಸಂಚಿಕೆ ೪೦

## ಭಾಗ - ೫

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು.

**ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ, ವಿಶ್ವೇಶ್ವರಯ್ಯ ಕೇಂದ್ರ, ಮುಖ್ಯ ಗೋಪುರ, 20ನೇ ಮಹಡಿ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-560001**

**ಅಧಿಸೂಚನೆ**

**ಸಂಖ್ಯೆ: ಶೀಬೆಪ್ರಾ 01 ಪ್ರಕಟ 2005, ದಿನಾಂಕ: 26ನೇ ಸೆಪ್ಟೆಂಬರ್, 2005**

(1) ಅರ್ಜಿ ಸ್ವೀಕರಿಸುವ ಕೊನೆಯ ದಿನಾಂಕ: 11.11.2005

(2) ನಿಗದಿಪಡಿಸಲಾದ ಅರ್ಜಿಯನ್ನು ಭರ್ತಿ ಮಾಡಿ, ಸೂಕ್ತ ಪ್ರಮಾಣ ಪತ್ರಗಳ ಪ್ರತಿಗಳನ್ನು ಸ್ವಯಂ ದೃಢೀಕರಿಸಿ ಈ ಕೆಳಗಿನ ವಿಳಾಸಕ್ಕೆ ರವಾನಿಸತಕ್ಕದ್ದು:
"ಆಡಳಿತಾಧಿಕಾರಿಗಳು, ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ, ವಿಶ್ವೇಶ್ವರಯ್ಯ ಕೇಂದ್ರ, ಮುಖ್ಯಗೋಪುರ, 20ನೇ ಮಹಡಿ, ಡಾ: ಅಂಬೇಡ್ಕರ್ ವೀಧಿ, ಬೆಂಗಳೂರು-560001.

(3) ಕರ್ನಾಟಕ ಸರ್ಕಾರದ ಈ ಕೆಳಕಂಡ ಇಲಾಖೆಗಳಲ್ಲಿ ಖಾಲಿ ಇರುವ ಬೆರಳಚ್ಚುಗಾರರ ರಿಕ್ತ ಸ್ಥಾನಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿ ಕರೆಯಲಾಗಿದೆ.

**ಬೆರಳಚ್ಚುಗಾರರು**

**ಕರ್ನಾಟಕ ಸರ್ಕಾರದ ಸಚಿವಾಲಯ**

| ಕ್ರ.ಸಂ. | ಮೀಸಲಾತಿ | ಪ.ಜಾ. | ಪ.ಪಂ. | ಸಾ.ಅ. | ಪ್ರವರ್ಗಗಳು | | | | | ಒಟ್ಟು |
|---|---|---|---|---|---|---|---|---|---|---|
| | | | | | I | II ಎ | II ಬಿ | III ಎ | III ಬಿ | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | ಮಹಿಳಾ ಅಭ್ಯರ್ಥಿಗಳು | 03 | 01 | 08 | - | 03 | - | - | 01 | 16 |
| 2. | ಮಾಜಿ ಸೈನಿಕರು | 01 | - | 03 | - | 01 | 01 | - | 01 | 07 |
| 3. | ಅಂಗವಿಕಲ ಅಭ್ಯರ್ಥಿಗಳು | - | - | 01 | - | - | - | - | - | 01 |
| 4. | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು | - | - | 01 | - | - | - | - | - | 01 |
| 5. | ಗ್ರಾಮೀಣ ಅಭ್ಯರ್ಥಿಗಳು | 02 | - | 07 | 01 | 02 | 01 | 01 | - | 14 |
| 6. | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳು | - | - | 01 | - | 01 | - | - | - | 02 |
| 7. | ಇತರೆ | 02 | 01 | 06 | 01 | 02 | - | - | 01 | 13 |
| | **ಒಟ್ಟು** | **08** | **02** | **27** | **02** | **09** | **02** | **01** | **03** | **54** |

### ಬೆರಳಚ್ಚುಗಾರರು
### ಭೂಮಾಪನ, ಕಂದಾಯ ವ್ಯವಸ್ಥೆ ಮತ್ತು ಭೂ ದಾಖಲೆಗಳ ಇಲಾಖೆ

| ಕ್ರ.ಸಂ. | ಮೀಸಲಾತಿ | ಪ.ಜಾ. | ಪ.ಪಂ. | ಸಾ.ಅ. | ಪ್ರವರ್ಗಗಳು | | | | | ಒಟ್ಟು |
|---|---|---|---|---|---|---|---|---|---|---|
| | | | | | I | II ಎ | II ಬಿ | III ಎ | III ಬಿ | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | ಮಹಿಳಾ ಅಭ್ಯರ್ಥಿಗಳು | - | 01 | 01 | - | 01 | - | 01 | 01 | 05 |
| 2. | ಮಾಜಿ ಸೈನಿಕರು | - | - | 01 | - | - | - | - | - | 01 |
| 3. | ಅಂಗವಿಕಲ ಅಭ್ಯರ್ಥಿಗಳು | - | - | 01 | - | - | - | - | - | 01 |
| 4. | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು | - | - | 01 | - | - | - | - | - | 01 |
| 5. | ಗ್ರಾಮೀಣ ಅಭ್ಯರ್ಥಿಗಳು | - | - | 01 | - | 01 | - | - | - | 02 |
| 6. | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳು | - | - | - | - | - | - | - | - | - |
| 7. | ಇತರೆ | 01 | - | - | - | - | - | - | - | 01 |
| | **ಒಟ್ಟು** | **01** | **01** | **05** | **00** | **02** | **-** | **01** | **01** | **11** |

### ಬೆರಳಚ್ಚುಗಾರರು
### ವಾರ್ತಾ ಇಲಾಖೆ

| ಕ್ರ.ಸಂ. | ಮೀಸಲಾತಿ | ಪ.ಜಾ. | ಪ.ಪಂ. | ಸಾ.ಅ. | ಪ್ರವರ್ಗಗಳು | | | | | ಒಟ್ಟು |
|---|---|---|---|---|---|---|---|---|---|---|
| | | | | | I | II ಎ | II ಬಿ | III ಎ | III ಬಿ | |
| 1 | 2 | 3 | 4 | 5 | 6 | 7 | 8 | 9 | 10 | 11 |
| 1. | ಮಹಿಳಾ ಅಭ್ಯರ್ಥಿಗಳು | - | - | - | - | 01 | - | - | - | 01 |
| 2. | ಮಾಜಿ ಸೈನಿಕರು | - | - | - | - | - | - | - | - | - |
| 3. | ಅಂಗವಿಕಲ ಅಭ್ಯರ್ಥಿಗಳು | - | - | - | - | - | - | - | - | - |
| 4. | ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು | - | - | - | - | - | - | - | - | - |
| 5. | ಗ್ರಾಮೀಣ ಅಭ್ಯರ್ಥಿಗಳು | - | - | - | - | - | - | - | - | - |
| 6. | ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳು | - | - | - | - | - | - | - | - | - |
| 7. | ಇತರೆ | - | - | - | - | - | - | 01 | - | 01 |
| | **ಒಟ್ಟು** | **-** | **-** | **-** | **-** | **01** | **-** | **01** | **-** | **02** |

(4) ಅರ್ಜಿಯನ್ನು ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರವು ನಿಗದಿಪಡಿಸಿದ್ದು, ಈ ಅರ್ಜಿಗಳು ಸರ್ಕಾರದ ಮುದ್ರಣ ಇಲಾಖೆ ಮತ್ತು ಎಲ್ಲಾ ಅಧಿಕೃತ ಪುಸ್ತಕ ಮಾರಾಟ ಮಳಿಗೆಗಳಲ್ಲಿ ದೊರೆಯುತ್ತವೆ. ಅರ್ಜಿದಾರರು ತಮ್ಮ ಸ್ವಂತ ಬರವಣಿಗೆಯಲ್ಲಿ ಅರ್ಜಿಯನ್ನು ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಒಂದು ಅರ್ಜಿ **ಬೆಲೆ 40.00 (ದ್ವಿಪ್ರತಿ)** ರೂ.ಗಳೆಂದು ನಿಗದಿಪಡಿಸಲಾಗಿದೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳನ್ನೊಳಗೊಂಡಂತೆ ಇತರ ಎಲ್ಲಾ ಅಭ್ಯರ್ಥಿಗಳೂ ಸಹ ಇದೇ ನಮೂನೆಯಲ್ಲಿ ಅರ್ಜಿಯನ್ನು ಸಲ್ಲಿಸತಕ್ಕದ್ದು.

(2) **ವಿದ್ಯಾರ್ಹತೆ:** ಕರ್ನಾಟಕ ಸರ್ಕಾರದ ಇಲಾಖೆಗಳಲ್ಲಿ ಬೆರಳಚ್ಚುಗಾರರಾಗಿ ಕೆಲಸ ಮಾಡಬಯಸುವ ಪ್ರತಿಯೊಬ್ಬ ಅಭ್ಯರ್ಥಿಯು ಈ ಕೆಳಕಂಡ ವಿದ್ಯಾರ್ಹತೆ ಪಡೆದಿರತಕ್ಕದ್ದು.

(ಅ) ಕರ್ನಾಟಕ ಸರ್ಕಾರದ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಅಥವಾ ಅದಕ್ಕೆ ತತ್ಸಮಾನವಾದ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

(ಆ) ಕರ್ನಾಟಕ ಸರ್ಕಾರದ ಪ್ರೌಢ ಶಿಕ್ಷಣ ಪರೀಕ್ಷಾ ಮಂಡಳಿಯು ನಡೆಸುವ ಕನ್ನಡ ಪ್ರೌಢ ದರ್ಜೆಯ ಬೆರಳಚ್ಚು ಪರೀಕ್ಷೆಯಲ್ಲಿ ಅಥವಾ ಅದಕ್ಕೆ ತತ್ಸಮಾನವಾದ ಪರೀಕ್ಷೆಯಲ್ಲಿ ತೇರ್ಗಡೆಯಾಗಿರಬೇಕು.

(6) **ವಯೋಮಿತಿ:**

(ಅ) ಅಭ್ಯರ್ಥಿಯು ಅರ್ಜಿ ಸಲ್ಲಿಸುವ ದಿನದಂದು 18 ವರ್ಷ ವಯಸ್ಸನ್ನು ಪೂರೈಸತಕ್ಕದ್ದು ಮತ್ತು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ ಅಭ್ಯರ್ಥಿಯ ವಯಸ್ಸು ಈ ಕೆಳಕಂಡಂತೆ ಮೀರಿರಬಾರದು.

1) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಪ್ರವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಗರಿಷ್ಟವಯೋಮಿತಿ - 38 ವರ್ಷಗಳು.

2) ಪ್ರವರ್ಗ IIಎ, IIಬಿ, IIIಎ ಮತ್ತು IIIಬಿ ಅಭ್ಯರ್ಥಿಗಳಿಗೆ ಗರಿಷ್ಟ ವಯೋಮಿತಿ - 36 ವರ್ಷಗಳು.

3) ಇತರೆ ಅಭ್ಯರ್ಥಿಗಳಿಗೆ ಗರಿಷ್ಟ ವಯೋಮಿತಿ - 33 ವರ್ಷಗಳು.

(ಆ) ಕರ್ನಾಟಕ ಸಿವಿಲ್ ಸೇವಾ (ಸಾಮಾನ್ಯ ನೇಮಕಾತಿ) ನಿಯಮಾವಳಿ 1977ರ ನಿಯಮ 6ರ ಅಡಿಯಲ್ಲಿ ವಿಧವೆಯರಿಗೆ ಮತ್ತು ಅಂಗವಿಕಲರಿಗೆ ಗರಿಷ್ಟ ವಯೋಮಿತಿಯಲ್ಲಿ 10 ವರ್ಷಗಳ ವಯೋಮಿತಿ ರಿಯಾಯತಿ ಇರುವುದು ಅನ್ವಯಿಸುತ್ತದೆ.

(7) **ಪೋಸ್ಟಲ್ ಆರ್ಡರ್ (ಅರ್ಜಿ ಶುಲ್ಕ):** ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ-1ಕ್ಕೆ ಸೇರಿದ ಅಭ್ಯರ್ಥಿಗಳಿಗೆ ಪೋಸ್ಟಲ್ ಆರ್ಡರ್ (ಅರ್ಜಿ ಶುಲ್ಕ) ನಿಂದ ವಿನಾಯಿತಿ ಇರುತ್ತದೆ. ಇತರೆ ಅಭ್ಯರ್ಥಿಗಳು ರೂ.5.00 (ಐದು)ನ್ನು ಕ್ರಾಸ್ ಮಾಡಿದ ಇಂಡಿಯನ್ ಪೋಸ್ಟಲ್ ಆರ್ಡರನ್ನು ಮಾತ್ರ ಈ ಕೆಳಕಂಡವರ ಹೆಸರಿನಲ್ಲಿ ಪಡೆದು (ಖರೀದಿಸಿ) ಅರ್ಜಿಯೊಂದಿಗೆ ಲಗತ್ತಿಸಿ ಕಳುಹಿಸಬೇಕು. ಈ ಪೋಸ್ಟಲ್ ಆರ್ಡರ್‌ನ್ನು ಅರ್ಜಿ ಸಲ್ಲಿಸುವ ದಿನಾಂಕದ 15 ದಿನಗಳಿಗೂ ಮುಂಚಿತವಾಗಿ ಪಡೆದಿರಬಾರದು.

- ಆಡಳಿತಾಧಿಕಾರಿಗಳು,
ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ,
ಬೆಂಗಳೂರು-560 001.

(8) **ಆಯ್ಕೆ ವಿಧಾನ:** ಕರ್ನಾಟಕ ನಾಗರಿಕ ಸೇವಾ (ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ನೇಮಕಾತಿ) ನಿಯಮಾವಳಿಗಳು 1983 ಮತ್ತು ಅದಕ್ಕೆ ಕಾಲಕಾಲಕ್ಕೆ ಮಾಡಿರುವ ತಿದ್ದುಪಡಿಗಳನ್ವಯ ಆಯ್ಕೆ ಪಟ್ಟಿಯನ್ನು ತಯಾರಿಸಲಾಗುವುದು.

(9) **ವೇತನ ಶ್ರೇಣಿ:** ಬೆರಳಚ್ಚುಗಾರರು-3000-75-3450-100-4450-125-5450 ಮತ್ತು ಮಾಹೆಯಾನ 60.00 ರೂ.ಗಳ ವಿಶೇಷ ಭತ್ಯೆ ಹಾಗೂ ಇತರೆ ಭತ್ಯೆಗಳು.

(10) **ವಿಶೇಷ ಸೂಚನೆಗಳು:**

(1) ಅಭ್ಯರ್ಥಿಯು ಅರ್ಜಿಯನ್ನು ಭರ್ತಿ ಮಾಡುವ ಮೊದಲು ಅರ್ಜಿಯೊಂದಿಗಿರುವ ಸೂಚನೆಗಳನ್ನು ಗಮನಿಸುವುದು. ಅರ್ಜಿಯನ್ನು ಸಲ್ಲಿಸುವಾಗ ಅದರೊಂದಿಗೆ ಈ ಕೆಳಕಂಡ ಪ್ರಮಾಣ ಪತ್ರಗಳ ಜೆರಾಕ್ಸ್ ಪ್ರತಿಗಳನ್ನು ದ್ವಿಪ್ರತಿಯಲ್ಲಿ ಸ್ವಯಂ ದೃಢೀಕೃತ ಪ್ರತಿಗಳೊಂದಿಗೆ ಸಲ್ಲಿಸಬೇಕು.

(ಅ) ವಿದ್ಯಾರ್ಹತೆಯ ಶೈಕ್ಷಣಿಕ ಪ್ರಮಾಣ ಪತ್ರಗಳು.

(ಆ) ಹುಟ್ಟಿದ ತಾರೀಖು ಬಗ್ಗೆ ದೃಢೀಕರಿಸುವ ಪ್ರಮಾಣ ಪತ್ರಗಳು.

(ಇ) ಅಭ್ಯರ್ಥಿಯು ಕಲಿತ ಶಾಲೆಯ ಮುಖ್ಯಸ್ಥರು ಕೊಟ್ಟಿರುವ ಮತ್ತು ಸ್ಥಳೀಯ ಗಣ್ಯ ವ್ಯಕ್ತಿಗಳು ನೀಡುವ ನಡತೆಯ ಬಗ್ಗೆ ಪ್ರಮಾಣ ಪತ್ರಗಳು.

(ಈ) ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ: ಹಿಂದುಳಿದ ಜಾತಿ (ಪ್ರವರ್ಗ-01, ಪ್ರವರ್ಗ-2ಎ, ಪ್ರವರ್ಗ-2ಬಿ, ಪ್ರವರ್ಗ-3ಎ ಮತ್ತು ಪ್ರವರ್ಗ-3ಬಿ) ಗಳ ಮೀಸಲಾತಿ ಪಡೆಯಲು ಇಚ್ಚಿಸುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ಇರುವ ಆಯಾ ಪ್ರಪತ್ರಗಳಲ್ಲಿ ಅಥವಾ ಪ್ರಪತ್ರದ ಮಾದರಿಯಲ್ಲಿ ಮಾತ್ರ ಸಂಬಂಧಪಟ್ಟವರಿಂದ ಪಡೆದ ಪ್ರಮಾಣ ಪತ್ರ.

(ಉ) ಅಂಗವಿಕಲ ಅಭ್ಯರ್ಥಿಗಳು, ಮಾಜಿ ಸೈನಿಕರು ಸೂಕ್ತ ಪ್ರಮಾಣ ಪ್ರತ್ರಗಳನ್ನು ಹಾಗೂ ಯೋಜನೆಗಳಿಂದ ನಿರಾಶ್ರಿತಗೊಂಡ ಅಭ್ಯರ್ಥಿಗಳು, ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಅಭ್ಯರ್ಥಿಗಳು, ಗ್ರಾಮೀಣ ಅಭ್ಯರ್ಥಿಗಳು ಹಾಗೂ ಈಗಾಗಲೇ ಸರ್ಕಾರದಲ್ಲಿ ಅಥವಾ ಸರ್ಕಾರದ ಸ್ವಾಮ್ಯಕ್ಕೆ ಒಳಪಡುವ ಇತರೇ ಕಡೆ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯೊಂದಿಗಿರುವ ಪ್ರಪತ್ರದಲ್ಲಿ ಅಥವಾ ಪ್ರಪತ್ರದ ಮಾದರಿಯಲ್ಲಿ ಮಾತ್ರ ಸಂಬಂಧಪಟ್ಟವರಿಂದ ಪಡೆದ ಪ್ರಮಾಣ ಪತ್ರ.

(ಊ) ಅಭ್ಯರ್ಥಿಯ ತನ್ನ ಇತ್ತೀಚಿನ ಎರಡು ಭಾವ ಚಿತ್ರ.

(ಋ) ಪ್ರಮಾಣಪತ್ರ/ ಭಾವಚಿತ್ರಗಳನ್ನು ಲಗತ್ತಿಸಿರದ ಹಾಗೂ ಪ್ರಮಾಣಪತ್ರಗಳಿಗೆ ಸ್ವಯಂದೃಢೀಕರಿಸಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

(2) ಅರ್ಜಿ ಸಲ್ಲಿಸುವ ಅಭ್ಯರ್ಥಿಗಳು ಲಕೋಟೆಯ ಮೇಲೆ **"ಬೆರಳಚ್ಚುಗಾರರ ಹುದ್ದೆಗೆ ಅರ್ಜಿ"** ಎಂದು ಸ್ಪಷ್ಟ ಅಕ್ಷರಗಳಲ್ಲಿ ನಮೂದಿಸತಕ್ಕದ್ದು.

(3) ಅರ್ಜಿದಾರರೊಡನೆ ಯಾವುದೇ ಪತ್ರ ವ್ಯವಹಾರಕ್ಕೆ ಅವಕಾಶವಿರುವುದಿಲ್ಲ.

(4) ಈಗಾಗಲೇ ಕೆಲಸ ಮಾಡುತ್ತಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಮೊದಲು ತಮ್ಮ ಇಲಾಖಾ ಮುಖ್ಯಸ್ಥರಿಂದ ಅನುಮತಿ ಪಡೆದು ಅವರ ಆಡಳಿತ ಕಛೇರಿಯ ಮೂಲಕ ಅರ್ಜಿಗಳನ್ನು ನಿಗದಿತ ಅವಧಿಯಲ್ಲಿ ಕಳುಹಿಸಬೇಕು.

(5) ಈ ಅಧಿಸೂಚನೆಯಲ್ಲಿ ನಮೂದಿಸಿರುವ ಬೆರಳಚ್ಚುಗಾರರ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಬದಲಾವಣೆಗೆ ಒಳಪಟ್ಟಿರುತ್ತದೆ.

(6) ಬೆರಳಚ್ಚುಗಾರರ ಆಯ್ಕೆಯು ಕರ್ನಾಟಕ ಸಿವಿಲ್ ಸೇವಾ (ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ನೇಮಕಾತಿ) ನಿಯಮಗಳು, 1983 ಮತ್ತು ಅದಕ್ಕೆ ಕಾಲಕಾಲಕ್ಕೆ ಮಾಡಿರುವ ತಿದ್ದುಪಡಿಗಳಿಗೆ ಒಳಪಟ್ಟಿರುತ್ತದೆ.

ಸರ್ಕಾರದ ಉಪ ಕಾರ್ಯದರ್ಶಿ,
ಸಿಆಸುಇ (ಆಡಳಿತ) ಹಾಗೂ ಶೀಘ್ರಲಿಪಿಗಾರರ
ಮತ್ತು ಬೆರಳಚ್ಚುಗಾರರ ಆಯ್ಕೆ ಪ್ರಾಧಿಕಾರ.

ಪಿ.ಆರ್.544

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಕಛೇರಿ
## ಟೆಂಡರ್ ಅಧಿಸೂಚನೆ

**ಸಂಖ್ಯೆ: ಸನೀವಿ:ಬೀದರ:ತಾಶಾ-3:ಟೆಂಡರ್: ಬೇ.ವಾಡಿ:ಇಂ.ಕೆರೆ: 2005/ 2859, ದಿನಾಂಕ:21ನೇ ಸೆಪ್ಟೆಂಬರ್, 2005**

ಕರ್ನಾಟಕ ರಾಜ್ಯದಲ್ಲಿ ಹಾಲಿ ನೋಂದಾಯಿಸಿರುವ ಅರ್ಹ ಸಿವಿಲ್ ಗುತ್ತಿಗೆದಾರರಿಂದ ಪಿ.ಡಬ್ಲ್ಯೂ.ಜಿ. ಫಾರಂ 65, 66 ರಂತೆ ಈ ಕೆಳಗೆ ನಮೂದಿಸಿರುವ ಕಾಮಗಾರಿಗಳಿಗಾಗಿ ದ್ವಿಪ್ರತಿಗಳಲ್ಲಿ ಮೊಹರ್ ಬಂದ ಐಟಂ ರೇಟ್ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

| ಕ್ರ.ಸಂ. | ಕಾಮಗಾರಿ ಹೆಸರು | ಟೆಂಡರಿಗಾಗಿ ಅಳವಡಿಸಿದ ಮೊತ್ತ | ಇ.ಎಂ.ಡಿ. | ಖಾಲಿ ಟೆಂಡರ್ ಪುಸ್ತಕ ಬೆಲೆ (ಹಿಂತಿರುಗಿಸಲಾರದ) | ಗುತ್ತಿಗೆದಾರರ ಅರ್ಹ ದರ್ಜೆ |
|---|---|---|---|---|---|
| 1 | 2 | 3 | 4 | 5 | 6 |
| 1. | ಬೀದರ್ ಜಿಲ್ಲೆ, ಬಸವಕಲ್ಯಾಣ ತಾಲ್ಲೂಕಿನ ಬೆಟಗೇರಾವಾಡಿ ಗ್ರಾಮದ ಹತ್ತಿರ ಹೊಸ ಇಂಗು ಕೆರೆ ನಿರ್ಮಾಣ. | ರೂ. 40.00 ಲಕ್ಷ. | ರೂ. 40000.00 | ರೂ.6000.00 +ತೆರಿಗೆ | ದರ್ಜೆ-1 |

ಮೇಲಿನ ಕಾಮಗಾರಿ **ಕೆಲಸದ ಅವಧಿ 4 (ನಾಲ್ಕು) ತಿಂಗಳ (ಮಳೆಗಾಲ ಹೊರತುಪಡಿಸಿ)** ಎಂದು ನಿಗದಿಪಡಿಸಲಾಗಿದೆ. ಟೆಂಡರ್ ನಡುವಳಿಗಳ ದಿನಾಂಕಗಳು ಮತ್ತು ವೇಳಾಪಟ್ಟಿ ಕೆಳಗಿನಂತಿದೆ.

| | | |
|---|---|---|
| 1. | ಖಾಲಿ ಟೆಂಡರ್‌ಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ | : 28.10.2005 |
| 2. | ಖಾಲಿ ಟೆಂಡರ್ (ದ್ವಿಪ್ರತಿಗಳಲ್ಲಿ) ಪುಸ್ತಕ ನೀಡುವ ದಿನಾಂಕ | : 09.11.2005 ಮತ್ತು 10.11.2005 ಕಛೇರಿ ವೇಳೆಯಲ್ಲಿ. |
| 3. | ಭರ್ತಿ ಮಾಡಿರುವ ಟೆಂಡರ್‌ಗಳನ್ನು ಸಲ್ಲಿಸುವ ದಿನಾಂಕ | : 17.11.2005 ಸಂಜೆ 4.00 ಗಂಟೆಯವರೆಗೆ |
| 4. | ಟೆಂಡರ್‌ಗಳನ್ನು ತೆರೆಯುವ ದಿನಾಂಕ (ಸಾಧ್ಯವಾಗಿದ್ದಲ್ಲಿ) | : 17.11.2005 ಸಂಜೆ 5.00 ಗಂಟೆಗೆ |

**ಷರತ್ತುಗಳು:**

1) ಆಯಾ ಕಾಮಗಾರಿಗೆ ಬೇಕಾಗಿರುವ ಇ.ಎಂ.ಡಿ. ರಾಷ್ಟ್ರೀಕೃತ ಬ್ಯಾಂಕಿನಿಂದ ಕಾರ್ಯನಿರ್ವಾಹಕ ಅಭಿಯಂತರವರ ಹೆಸರಿನಲ್ಲಿ ಪಡೆದಿರುವ ಡಿ.ಡಿ./ ಎಫ್.ಡಿ.ಆರ್./ ಬ್ಯಾಂಕರ್ಸ್ ಚೆಕ್ಕು ಮೂಲಕ ಅಥವಾ ಕಾರ್ಯನಿರ್ವಾಹಕ ಅಭಿಯಂತರವರ ಹೆಸರಿಗೆ ಪ್ರಮಾಣೀಕರಿಸಿದ (ಪ್ಲೆಡ್ಜ್) ಎನ್.ಎಸ್.ಸಿ. ಮೂಲಕ ಖಾಲಿ ಟೆಂಡರ್‌ಗಾಗಿ ಅರ್ಜಿ ಸಲ್ಲಿಸುವಾಗ ಸಲ್ಲಿಸುವುದು ಹಾಗೂ ಟೆಂಡರ್ ತೆರೆಯುವ ದಿನಾಂಕದಿಂದ ಕನಿಷ್ಠ 90 ದಿನಗಳವರೆಗೆ ಚಾಲ್ತಿಯಲ್ಲಿರಬೇಕು.
2) ಖಾಲಿ ಟೆಂಡರ್‌ಗಾಗಿ ಸಲ್ಲಿಸುವ ಅರ್ಜಿಯೊಡನೆ ಗುತ್ತಿಗೆದಾರರು ನೋಂದಣಿ ಪುಸ್ತಕದ ಪ್ರತಿ ಲಗತ್ತಿಸುವುದು ಹಾಗೂ ಖಾಲಿ ಟೆಂಡರ್ ಪುಸ್ತಕ ಪಡೆಯುವಾಗ ಮೂಲ ನೋಂದಣಿ ಪುಸ್ತಕ ಸಾದರ ಪಡಿಸುವುದು.
3) ಖಾಲಿ ಟೆಂಡರ್ ಪುಸ್ತಕಗಳ ಬೆಲೆ ಯಾವುದೇ ಸ್ಥಿತಿಯಲ್ಲಿ ಹಿಂತಿರುಗಿಸಲಾಗುವಂತಿಲ್ಲ.
4) ಯಾವುದೇ ಅಥವಾ ಎಲ್ಲ ಟೆಂಡರ್‌ಗಳನ್ನು ತಿರಸ್ಕರಿಸುವ ಹಕ್ಕು ಕಾದಿರಿಸಲಾಗಿದೆ.
5) ಅಂಚೆಯ ಮೂಲಕ ಟೆಂಡರ್ ವ್ಯವಹಾರ ಬಯಸಿದ್ದಲ್ಲಿ ಅಂಚೆಯಲ್ಲಿ ಯಾವುದಾದರೂ ವಿಳಂಬವಾದರೆ ಈ ಕಛೇರಿ ಹೊಣೆಗಾರನಾಗುವುದಿಲ್ಲ.
6) ಮೇಲೆ ನಮೂದಿಸಿರುವ ಯಾವುದಾದರೂ ದಿನಾಂಕ ಸಾರ್ವಜನಿಕ ರಜೆ ಎಂದು ಘೋಷಿಸಿದರೆ ಅದರ ಮಾರನೆ ದಿನ ವ್ಯವಹಾರ ದಿನ ಎಂದು ಪರಿಗಣಿಸತಕ್ಕದ್ದು.

**ಶ್ಯಾಮರಾವ ಕುಲಕರ್ಣಿ**
ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ
ವಿಭಾಗ, ಬೀದರ್, ದೂರವಾಣಿ ಸಂಖ್ಯೆ: 08482-232080

ಪಿ.ಆರ್.540

## ಜಲ ಸಂಪನ್ಮೂಲ ಇಲಾಖೆ (ಸಣ್ಣ ನೀರಾವರಿ)
## ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಕಛೇರಿ
## ಟೆಂಡರ್ ಪ್ರಕಟಣೆ
## (ಎರಡು ಲಕೋಟೆ ಪದ್ಧತಿ)

**ಸಂಖ್ಯೆ: ಸನೀವಿ:ಬೀದರ:ತಾಶಾ-3:ಮನ್ನಳ್ಳಿ/ ಇಂಗು ಕೆರೆ/ ಟೆಂಡರ್:2005-06/ 2860, ದಿನಾಂಕ:21ನೇ ಸೆಪ್ಟೆಂಬರ್, 2005**

ಕಾಮಗಾರಿಯ ಹೆಸರು: ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಮನ್ನಳ್ಳಿ ಗ್ರಾಮದ ಹತ್ತಿರ ಹೊಸ ಇಂಗು ಕೆರೆ ನಿರ್ಮಾಣ.

ಕರ್ನಾಟಕ ಲೋಕೋಪಯೋಗಿ ಸಂಹಿತೆ ಪಿ.ಡಬ್ಲ್ಯೂ.ಜಿ. 65 ಮತ್ತು 66 ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಕತೆ ಆಕ್ಟ್ 2000 ಮತ್ತು ಅದರ ಇತ್ತೀಚಿನ ತಿದ್ದುಪಡಿಗಳಂತೆ ಕರ್ನಾಟಕ ರಾಜ್ಯದಲ್ಲಿ ಲೋಕೋಪಯೋಗಿ ಇಲಾಖೆಯಲ್ಲಿ ಹಾಲಿ ನೋಂದಾಯಿಸಿರುವ ಪ್ರಥಮ ದರ್ಜೆ (ಸಿವಿಲ್) ಗುತ್ತಿಗೆದಾರರಿಂದ ಈ ಕೆಳಗೆ ನಮೂದಿಸಿದ ಕಾಮಗಾರಿಗಾಗಿ ಐಟಂ ರೇಟ್ ಟೆಂಡರ್‌ಗಳು ಎರಡು ಲಕೋಟೆ ಪದ್ಧತಿಯಂತೆ ದ್ವಿಪ್ರತಿಯಲ್ಲಿ ಸಲ್ಲಿಸಲು ಕರೆಯಲಾಗಿದೆ. ಎರಡು ಲಕೋಟೆಗಳಲ್ಲಿ ಒಂದು **"ತಾಂತ್ರಿಕ ಬಿಡ್"** ಎರಡನೆಯದು **"ಆರ್ಥಿಕ ಬಿಡ್"** ಆಗಿರುತ್ತದೆ. ತಾಂತ್ರಿಕ ಬಿಡ್ಡನ್ನು ಪ್ರಥಮ ಹಂತದಲ್ಲಿ ತೆರೆಯಲಾಗುವುದು ಮತ್ತು ತದನಂತರ ಕೇವಲ ತಾಂತ್ರಿಕ ಬಿಡ್‌ನಲ್ಲಿ ಅರ್ಹತೆ ಪಡೆದ ಗುತ್ತಿಗೆದಾರರ **"ಆರ್ಥಿಕ ಬಿಡ್ಡನ್ನು"** ತೆರೆದು ವಿಶ್ಲೇಶಿಸಲಾಗುವುದು.

ಕಾಮಗಾರಿಯ ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ಅರ್ಹ ಗುತ್ತಿಗೆದಾರರು ಅರ್ಜಿಯನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ ಕಛೇರಿ, (ಪ್ರತಾಪ ನಗರ) ನೌಬಾದ್, ಬೀದರ್‌ನಲ್ಲಿ ಟೆಂಡರ್ ಪುಸ್ತಕಗಳ ಬೆಲೆಯೊಂದಿಗೆ (ಹಿಂತಿರುಗಿಸಲಾರದ) ಸಲ್ಲಿಸುವುದು) ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಪುಸ್ತಕಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಕಛೇರಿಯಲ್ಲಿಯೇ ನಿಗದಿತ ದಿನಾಂಕ ಮತ್ತು ವೇಳೆಯಲ್ಲಿ ನೀಡಲಾಗುವುದು.

ಭರ್ತಿ ಮಾಡಿದ ಮೊಹರು ಬಂದ ಟೆಂಡರುಗಳನ್ನು ಏಕ ಕಾಲದಲ್ಲಿ ಸದರಿ ಕಾಮಗಾರಿಗಾಗಿ ಇರಿಸಿದ ಮೊಹರು ಬಂದ ಟೆಂಡರ್ ಪೆಟ್ಟಿಗೆಗಳಲ್ಲಿ (1) ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ (ಪ್ರತಾಪ ನಗರ, ನೌಬಾದ್ ಬೀದರ್) (2) ಮುಖ್ಯ ಇಂಜಿನೀಯರ್, ಸಣ್ಣ ನೀರಾವರಿ (ಉತ್ತರ) ವಲಯ, ಬಿಜಾಪುರ ಮತ್ತು (3) ಅಧೀಕ್ಷಕ ಅಭಿಯಂತರರು, ಸಣ್ಣ ನೀರಾವರಿ ವೃತ್ತ, ಐವಾನ-ಇ-ಶಾಹಿ, ಗುಲ್ಬರ್ಗಾ ರವರ ಕಛೇರಿಗಳಲ್ಲಿ ಸ್ವೀಕರಿಸಲಾಗುವುದು.

ಕಾಮಗಾರಿಯ ತಾಂತ್ರಿಕ ಬಿಡ್‌ಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ಇವರ ಕಛೇರಿಯಲ್ಲಿ ಕಾರ್ಯನಿವಾಹಕ ಅಭಿಯಂತರರು ಹಾಜರಿದ್ದ ಗುತ್ತಿಗೆದಾರರ ಅಥವಾ ಅವರ ಪರವಾಗಿ ಹಾಜರಿದ್ದ ಪ್ರತಿನಿಧಿಗಳ ಉಪಸ್ಥಿತಿಯಲ್ಲಿ ತೆರೆಯುವರು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದ ಗುತ್ತಿಗೆದಾರರ ಹೆಸರುಗಳನ್ನು ಕಛೇರಿಯ ಸೂಚನಾ ಫಲಕದಲ್ಲಿ ಪ್ರಕಟಿಸಲಾಗುವುದು.

| | | |
|---|---|---|
| 1. | ಕಾಮಗಾರಿಯ ಹೆಸರು | : ಬೀದರ್ ಜಿಲ್ಲೆ ಬಸವಕಲ್ಯಾಣ ತಾಲ್ಲೂಕಿನ ಮನ್ನಳ್ಳಿ ಗ್ರಾಮದ ಹತ್ತಿರ ಹೊಸ ಇಂಗು ಕೆರೆ ನಿರ್ಮಾಣ. |
| 2. | ಟೆಂಡರಿಗೆ ಅಳವಡಿಸಿದ ಕಾಮಗಾರಿಯ ಅಂದಾಜು ಮೊತ್ತ. | : ರೂ. 103.00 ಲಕ್ಷ |
| 3. | ಇ.ಎಂ.ಡಿ. (ಭದ್ರತಾ ಠೇವಣಿ) (ಟೆಂಡರ್ ತೆರೆಯುವ ದಿನಾಂಕದಿಂದ 180 ದಿನಗಳವರೆಗೆ ಚಾಲ್ತಿಯಲ್ಲಿರಬೇಕು) | : ರೂ. 1,03,000.00 |
| 4. | ಖಾಲಿ ಟೆಂಡರ್ ಪುಸ್ತಕಗಳ ಬೆಲೆ (ಯಾವುದೇ ಸಂದರ್ಭದಲ್ಲಿ ಹಿಂತಿರುಗಿಸಲಾಗುವುದಿಲ್ಲಾ) | : ರೂ.10,000.00+ ತೆರಿಗೆ |
| 5. | ಕಾಮಗಾರಿಯನ್ನು ಪೂರ್ಣಗೊಳಿಸಲು ಕಾಲಾವಕಾಶ | : 9 ತಿಂಗಳು (ಮಳೆಗಾಲ ಹೊರತುಪಡಿಸಿ) |

| | | |
|---|---|---|
| 6. | ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ<br>ಕಛೇರಿ ವೇಳೆಯಲ್ಲಿ 5.30 ಗಂಟೆಯವರೆಗೆ | : 28.10.2005. |
| 7. | ಗುತ್ತಿಗೆದಾರರಿಗೆ ಖಾಲಿ ಟೆಂಡರ್ ಪುಸ್ತಕಗಳನ್ನು ನೀಡುವ ದಿನಾಂಕ<br>ಕಛೇರಿ ವೇಳೆಯಲ್ಲಿ 5.30 ಗಂಟೆಯವರೆಗೆ | : 09.11.2005 ಮತ್ತು 10.11.2005 |
| 8. | ಭರ್ತಿ ಮಾಡಿದ ಮೊಹರು ಬಂದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ (ತಾಂತ್ರಿಕ ಬಿಡ್ ಲಕೋಟೆ ಆರ್ಥಿಕ ಬಿಡ್ ಲಕೋಟೆ ಪ್ರತ್ಯೇಕ) | : 17.11.2005 4.00 ಗಂಟೆಯವರೆಗೆ |
| 9. | ತಾಂತ್ರಿಕ ಬಿಡ್‌ನ್ನು ತೆರೆಯುವ ದಿನಾಂಕ (ಸಾಧ್ಯವಾದಲ್ಲಿ) | : 18.11.2005 4.00 ಗಂಟೆಗೆ |
| 10. | ಅರ್ಹ ಗುತ್ತಿಗೆದಾರರ ಆರ್ಥಿಕ ಬಿಡ್‌ನ್ನು ತೆರೆಯುವ ದಿನಾಂಕ | : ತದನಂತರ ತಿಳಿಸಲಾಗುವುದು. |

**ಷರತ್ತುಗಳು:**

1) ಟೆಂಡರ್ ಖಾಲಿ ಪುಸ್ತಕಗಳನ್ನು ಪಡೆಯಲು ಇಚ್ಛಿಸಿರುವ ಗುತ್ತಿಗೆದಾರರು ಅರ್ಜಿಯ ಜೊತೆಯಲ್ಲಿ ಖಾಲಿ ಟೆಂಡರ್ ಪುಸ್ತಕಗಳ (ಹಿಂತಿರುಗಿಸಲಾಗದ) ಬೆಲೆಯನ್ನು, ಗುತ್ತಿಗೆದಾರರು ನೋಂದಾಯಿಸಿರುವ ಪ್ರಮಾಣ ಪತ್ರದ ಪ್ರತಿಯನ್ನು ಮತ್ತು ಇತ್ತೀಚಿನ ಸೇಲ್ಸ್ ಟ್ಯಾಕ್ಸ್ ಮತ್ತು ಇನ್‌ಕಂ ಟ್ಯಾಕ್ಸ್ ಕ್ಲಿಯರೆನ್ಸ್ ದಸ್ತಾವೇಜುಗಳ ಪ್ರತಿಗಳನ್ನು ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರಿಗೆ ಸಲ್ಲಿಸುವುದು.
2) ಅಗತ್ಯ ಇ.ಎಂ.ಡಿ. (ಭದ್ರತಾ ಠೇವಣಿ)ಯನ್ನು ರಾಷ್ಟ್ರೀಕೃತ ಬ್ಯಾಂಕುಗಳ ಡಿ.ಡಿ./ ಎಫ್.ಡಿ.ಆರ್/ ಬ್ಯಾಂಕರ್ಸ್ ಚೆಕ್/ ಟಿ.ಡಿ.ಆರ್. ರೂಪದಲ್ಲಿ ಅಥವಾ ಪ್ಲೆಡ್ಜ್ ಮಾಡಿದ ಎನ್.ಎಸ್.ಸಿ ರೂಪದಲ್ಲಿ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಹೆಸರಿನಲ್ಲಿ ಪಡೆದು ಖಾಲಿ ಟೆಂಡರ್ ಪುಸ್ತಕಗಳಿಗಾಗಿ ಸಲ್ಲಿಸುವ ಅರ್ಜಿ ಜೊತೆಯಲ್ಲಿ ಸಲ್ಲಿಸುವುದು.
3) ಟೆಂಡರಿನಲ್ಲಿ ಅನರ್ಹರಾದ ಗುತ್ತಿಗೆದಾರರ ಇ.ಎಂ.ಡಿ. (ಭದ್ರತಾ ಠೇವಣಿ) ಯನ್ನು ಟೆಂಡರುಗಳು ತೆರೆದ 90 (ತೊಂಭತ್ತು) ದಿನಗಳ ನಂತರವೇ ಹಿಂತಿರುಗಿಸಲಾಗುವುದು.
4) ಟೆಂಡರಿನ ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸಿರುವ ಎಲ್ಲಾ ದಾಖಲೆಗಳು ನೋಟರಿ ಅಥವಾ ಗೆಜೆಟೆಡ್ ಅಧಿಕಾರಿಗಳಿಂದ ಮೇಲ್ ರುಜು ಮಾಡಿರಬೇಕು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಟೆಂಡರಿನ ತಾಂತ್ರಿಕ ಬಿಡ್ ತೆರೆಯುವ ದಿನಾಂಕದಂದು ಅಥವಾ ನಿಗದಿತ ದಿನಾಂಕಗಳಂದು ಗುತ್ತಿಗೆದಾರರು ಕಛೇರಿಗೆ ಹಾಜರುಪಡಿಸಬೇಕು. ಇಲ್ಲದಿದ್ದಲ್ಲಿ ಅಂತಹ ಟೆಂಡರ್ ತಿರಸ್ಕರಿಸಲಾಗುವುದು.
5) ಷರತ್ತಿನ ಟೆಂಡರುಗಳನ್ನು ಪರಿಗಣಿಸಲಾಗುವುದಿಲ್ಲ.
6) ಖಾಲಿ ಟೆಂಡರ್ ಪುಸ್ತಕಕ್ಕಾಗಿ ಅರ್ಜಿ ಸಲ್ಲಿಸುವ ಗುತ್ತಿಗೆದಾರರು ಈ ಕೆಳಕಂಡ ಅರ್ಹತೆ ಹೊಂದಿರಬೇಕು.
   i 2005-06ರ ಸಾಲಿನಿಂದ 5 ವರ್ಷದೊಳಗೆ ಹಿಂದಕ್ಕೆ ಇಂತಹದೇ ಒಂದು ಕಾಮಗಾರಿಯನ್ನು ಟೆಂಡರ್ ಅವಧಿಯೊಳಗೆ ಪೂರ್ಣಗೊಳಿಸಿರಬೇಕು. ಪೂರ್ತಿಗೊಳಿಸಿದ ಬಗ್ಗೆ ಸಂಬಂಧಪಟ್ಟ ಪ್ರಾಧಿಕಾರದಿಂದ ದೃಢೀಕರಣ ಪತ್ರ ಸಲ್ಲಿಸುವುದು. ವರ್ಷ 2005-06ನೇ ಸಾಲಿನ ದರಗಳ ಮಟ್ಟಕ್ಕೆ ಹೋಲಿಸಿದಾಗ ಕನಿಷ್ಠ ರೂ. 206.00 ಲಕ್ಷಗಳ (ಎರಡು ನೂರಾ ಆರು ಲಕ್ಷ ಮಾತ್ರ) ಆರ್ಥಿಕ ವಹಿವಾಟು ಎರಡು ಆರ್ಥಿಕ ವರ್ಷಗಳಲ್ಲಿ ಮಾಡಿರಬೇಕು. ವರ್ಷ 2005-06ನೇ ಸಾಲಿನ ಆರ್ಥಿಕ ವಹಿವಾಟಿಗೆ ಹೋಲಿಸಿದಾಗ ಪ್ರತಿವರ್ಷಕ್ಕೆ ಶೇಕಡಾ 10ರ ಹೆಚ್ಚಿನ ರಿಯಾಯಿತಿಯನ್ನು ಪರಿಗಣಿಸಲಾಗುವುದು.
   ii ಪ್ರಮುಖ ಗುತ್ತಿಗೆದಾರರೆಂದು ಕನಿಷ್ಠ ಇಂತಹದೆ ಒಂದು ಕಾಮಗಾರಿ (ಶೇಕಡ 90ರಷ್ಟು ಗುತ್ತಿಗೆ ಮೊತ್ತಕ್ಕಿಂತ ಕಡಿಮೆ ಇಲ್ಲದಂತೆ ಎಂದರೆ 92.70 ಲಕ್ಷ) ತೃಪ್ತಿಕರವಾಗಿ (ಪ್ರಮುಖ ಅಂಶಗಳಾದ ಅಗೆತ, ಮಣ್ಣಿನ ಒಡ್ಡು ಮತ್ತು ಕಾಂಕ್ರೀಟ್ ಕೆಲಸಗಳನ್ನು ವರ್ಷ 2005-06ನೇ ಸಾಲಿನ ದರಗಳ ಮಟ್ಟಕ್ಕೆ)
   iii ಯಾವುದೇ ಒಂದು ವರ್ಷದಲ್ಲಿ ಈ ಕೆಳಕಾಣಿಸಿದ ಕನಿಷ್ಠ ಪರಿಮಾಣದ ಕೆಲಸಗಳನ್ನು ಮಾಡಿರಬೇಕು.
      ಅ. ಅಗೆತದ ಕೆಲಸ 16000 ಘ.ಮೀ.
      ಆ. ಮಣ್ಣಿನ ಒಡ್ಡು 47505 ಘ.ಮೀ.
      ಇ. ಸಿಮೆಂಟ್ ಕಾಂಕ್ರೀಟ್ 605 ಘ.ಮೀ.
7) ಅರ್ಜಿದಾರರು ಪ್ರದರ್ಶಿಸುವುದು.
   i ಮುಖ್ಯವಾಗಿ ಹಾಗೂ ಮಹತ್ವದಾಗಿರುವ ಈ ಕೆಳಕಂಡ ಯಂತ್ರೋಪಕರಣಗಳನ್ನು (ಸ್ವಂತ ಅಥವಾ ಲೀಜ್ ಮೇಲೆ ಹೊಂದಿರಬೇಕು. ಲೀಜ್ ಆಗಿದ್ದಲ್ಲಿ ಜಿ.ಪಿ.ಎ. ಮೂಲ ದಾಖಲಾತಿ ಒದಗಿಸುವುದು.
      1) ಎಕ್ಸ್‌ಕವೇಟರ್/ ಪೋಕ್ಲೆನ್ 2 ನಂ.
      2) ಲಾರಿಗಳು/ ಟಿಪ್ಪರ್‌ಗಳು 10 ನಂ.
      3) ರೋಡ್ ರೋಲರ್ 2 ನಂ.
      4) ಕಾಂಕ್ರೀಟ್ ಮಿಕ್ಸರ್ 2 ನಂ.
      5) ನೀರು ಎತ್ತುವ ಪಂಪುಗಳು 2 ನಂ.
   ii ಈ ಯೋಜನೆಗೆ 5 ವರ್ಷಗಳ ಸಿವಿಲ್ ಇಂಜಿನಿಯರಿಂಗ್ ಕಾಮಗಾರಿಯ ಇಂತಹದೇ ಅನುಭವವುಳ್ಳ ಒಬ್ಬ ಮ್ಯಾನೇಜರ್ ಹಾಗೂ ಸಾಕಷ್ಟು ಅನುಭವವುಳ್ಳ ಈ ತರಹದ ಕೆಲಸ ಮಾಡಿರುವ ಪರಿಣಿತರು ಹೊಂದಿರಬೇಕು.
   iii ಋಣ ವಿಮೋಚಿಸುವ ಸಾಲ ಸೌಲಭ್ಯಕ್ಕಾಗಿ ರೂ. 50.00 ಲಕ್ಷಕ್ಕೂ ಕಡಿಮೆ ಇಲ್ಲದ ಸಾಲ ಕಾಮಗಾರಿಗಾಗಿ ಪೂರೈಸುವಲ್ಲಿ ಬ್ಯಾಂಕಿನಿಂದ ಸಹಾಯ ಒದಗಿಸುವಂತಿರಬೇಕು.
8) ಗುತ್ತಿಗೆದಾರರು ಕಾಮಗಾರಿಗೆ ಪೂರೈಸಲು ಸಾಕಷ್ಟು ಮಾನವ ಶಕ್ತಿ ಹೊಂದಿರಬೇಕು.
9) ಗುತ್ತಿಗೆದಾರರು ಕಾಮಗಾರಿಗೆ ಬೇಕಾಗುವ ಐ.ಎಸ್. ಗುಣಮಟ್ಟವುಳ್ಳ ಉಕ್ಕು ಮತ್ತು ಸಿಮೆಂಟನ್ನು ತಮ್ಮ ಸ್ವಂತ ಖರ್ಚಿನಿಂದಲೇ ಉಪಯೋಗಿಸುವುದು.
10) ತಾಂತ್ರಿಕ ಬಿಡ್‌ನಲ್ಲಿ ತಿಳಿಸಲಾದ ಎಲ್ಲಾ ವಿವರಗಳಿಗೆ ಸೂಕ್ತ ಪ್ರಾಧಿಕಾರದಿಂದ ಪಡೆದಿರುವ ಪ್ರಮಾಣ ಪತ್ರಗಳ ಸ್ವತಃ ದೃಢೀಕರಿಸಿದ ಪ್ರತಿಗಳನ್ನು ಬಿಡ್ ಜೊತೆಗೆ ಸಲ್ಲಿಸುವುದು ಹಾಗೂ ಅಗತ್ಯ ಕಂಡು ಬಂದಲ್ಲಿ ಮೂಲ ಪ್ರತಿಗಳನ್ನು ಸಾದರ ಪಡಿಸುವುದು.

11) ಅಂಚೆಯ ಮೂಲಕ ಖಾಲಿ ಟೆಂಡರ್ ಪುಸ್ತಕಗಳನ್ನು ನೀಡಲಾಗುವುದಿಲ್ಲ.

12) ಯಾವುದೇ ಕಾರಣ ನೀಡದೆ ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ತಿರಸ್ಕರಿಸುವ ಹಕ್ಕು ಕಾಯ್ದಿರಿಸಲಾಗಿದೆ.

13) ಗುತ್ತಿಗೆದಾರರು ಖಾಲಿ ಟೆಂಡರ್ ಪುಸ್ತಕಗಳನ್ನು ಪಡೆಯಲು ತಮ್ಮ ಮೂಲ ನೋಂದಣಿ ಪುಸ್ತಕವನ್ನು ತರುವುದು.

14) ಸದರಿ ಕಾಮಗಾರಿಯ ಬಗ್ಗೆ ಏನಾದರೂ ಮಾಹಿತಿ ಪಡೆಯಬೇಕಾದರೆ, ಕಛೇರಿಯ ವೇಳೆಯಲ್ಲಿ ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ, ಬೀದರ್ ರವರ ಕಛೇರಿಯಿಂದ ಪಡೆಯಬಹುದು. ಕಛೇರಿ ದೂರವಾಣಿ ಸಂಖ್ಯೆ: 08482- 232080.

15) ಸದರಿ ಟೆಂಡರ್ ಘಟನಾವಳಿಗಳಿಗೆ ಅಳವಡಿಸಿದ ದಿನಾಂಕಗಳಲ್ಲಿ ಯಾವುದಾದರೂ ಸಾರ್ವತ್ರಿಕ ರಜೆ ಎಂದು ಘೋಷಿತವಾದಲ್ಲಿ ಆ ದಿನಾಂಕದ ಮರು ದಿನಾಂಕವನ್ನು ಟೆಂಡರ್‌ಗಳಿಗಾಗಿ ಪರಿಗಣಿಸುವುದು.

**ಶ್ಯಾಮರಾವ ಕುಲಕರ್ಣಿ**

ಪಿ.ಆರ್.541

ಕಾರ್ಯನಿರ್ವಾಹಕ ಅಭಿಯಂತರರು, ಸಣ್ಣ ನೀರಾವರಿ ವಿಭಾಗ,
ಬೀದರ್, ದೂರವಾಣಿ ಸಂಖ್ಯೆ: 08482-232080

## ಉಪ ಕೃಷಿ ನಿರ್ದೇಶಕರ ಕಛೇರಿ (ವಾಣಿಜ್ಯ ಬೆಳೆಗಳು), ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು

## ಟೆಂಡರ್ ಕಂ ಬಹಿರಂಗ ಹರಾಜು ಪ್ರಕಟಣೆ

### ಸಂಖ್ಯೆ:ಉಕೃನಿ/ ವಾಬೆ/ ವಾಹನ/ ವಿಲೇವಾರಿ/ 1/ 2005-06, ದಿನಾಂಕ:17ನೇ ಸೆಪ್ಟೆಂಬರ್, 2005

**ವಿಷಯ:** ಉಪಕೃಷಿ ನಿರ್ದೇಶಕರು (ವಾಣಿಜ್ಯ ಬೆಳೆಗಳು) ಕೃಷಿ ನಿರ್ದೇಶನಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು ಕಛೇರಿಯ ವಾಹನ ಸಂಖ್ಯೆ: ಸಿಎಬಿ-785 ಮಹೇಂದ್ರ ಮಹೇಂದ್ರ ಜೀಪನ್ನು ಟೆಂಡರ್ ಕಂ ಬಹಿರಂಗ ಹರಾಜಿನ ಮೂಲಕ ವಿಲೇವಾರಿ ಮಾಡುವ ಬಗ್ಗೆ.

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಉಪ ಕೃಷಿ ನಿರ್ದೇಶಕರು (ವಾಣಿಜ್ಯ ಬೆಳೆಗಳು), ಕೃಷಿ ಆಯುಕ್ತರ ಕಾರ್ಯಾಲಯ, ಶೇಷಾದ್ರಿ ರಸ್ತೆ, ಬೆಂಗಳೂರು-1 ರವರ ಕಛೇರಿಯ ವಾಹನ ಸಂಖ್ಯೆ: ಸಿಎಬಿ-785 ಮಹೇಂದ್ರ ಮಹೇಂದ್ರ ಜೀಪನ್ನು ಟೆಂಡರ್ -ಕಂ- ಬಹಿರಂಗ ಹರಾಜಿನ ಮೂಲಕ ಈ ಕಾರ್ಯಾಲಯದ ಆವರಣದಲ್ಲಿ ವಾಹನ ನಿಲ್ಲಿಸಿರುವ ಸ್ಥಳದಲ್ಲಿ ಯಾವ ರೀತಿ ಇದೆಯೋ ಅದೇ ಸ್ಥಿತಿಯಲ್ಲಿ ವಿಲೇವಾರಿ ಮಾಡಲಾಗುವುದು. ಇಚ್ಛೆಯುಳ್ಳ ಸಾರ್ವಜನಿಕರು ಈ ಟೆಂಡರ್ ಕಂ- ಬಹಿರಂಗ ಹರಾಜಿನಲ್ಲಿ ಭಾಗವಹಿಸಬಹುದು. ವಿವರಗಳು ಕೆಳಕಂಡಂತಿರುತ್ತದೆ.

| ವಾಹನದ ಸಂಖ್ಯೆ ಮಾದರಿ | ವಿಕ್ರಯದ ಮಾದರಿ | ಟೆಂಡರ್ ಸ್ವೀಕರಿಸುವ ಸ್ಥಳ | ಟೆಂಡರ್ ಸ್ವೀಕರಿಸುವ ಕೊನೆಯ ದಿನಾಂಕ | ಹರಾಜಿನ ದಿನಾಂಕ ಮತ್ತು ಸಮಯ | ಇಎಂಡಿ ಠೇವಣಿ | ಬಹಿರಂಗ ಹರಾಜು ಮಾಡುವ ಸ್ಥಳ |
|---|---|---|---|---|---|---|
| 1 | 2 | 3 | 4 | 5 | 6 | 7 |
| ಸಿಎಬಿ-785 (ಡೀಸೆಲ್) 1980 ಮಾದರಿ | ಟೆಂಡರ್-ಕಂ-ಬಹಿರಂಗ ಹರಾಜು | ಉಪ ಕೃಷಿ ನಿರ್ದೇಶಕರು (ವಾಣಿಜ್ಯ ಬೆಳೆಗಳು) ಶೇಷಾದ್ರಿ ರಸ್ತೆ, ಬೆಂಗಳೂರು. | 16.11.2005 ಮಧ್ಯಾಹ್ನ 12.00 ಗಂಟೆ ವರೆಗೆ | 16.11.2005 ಅಪರಾಹ್ನ 4.00 ಗಂಟೆಗೆ | ರೂ. 5000-00 (ಐದು ಸಾವಿರ) ಕ್ರಾಸ್ ಮಾಡಿದ ಡಿ.ಡಿ. ಉಪ ಕೃಷಿ ನಿರ್ದೇಶಕರು, (ವಾಣಿಜ್ಯ ಬೆಳೆಗಳು) ಬೆಂಗಳೂರು ರವರ ಹೆಸರಿನಲ್ಲಿ | ಕೃಷಿ ನಿರ್ದೇಶನಾಲಯದ ಆವರಣ, ಶೇಷಾದ್ರಿ ರಸ್ತೆ, ಬೆಂಗಳೂರು-1. |

**ಷರತ್ತುಗಳು:**

1) ವಾಹನಕ್ಕೆ ಟೆಂಡರ್ ಸಲ್ಲಿಸುವವರು ಬಿಳಿಯ ಹಾಳೆಯಲ್ಲಿ ಗರಿಷ್ಠ ಮೊತ್ತವನ್ನು ಅಂಕಿಗಳಲ್ಲಿ ಮತ್ತು ಅಕ್ಷರಗಳಲ್ಲಿ ನಮೂದಿಸಿ ರೂ.5000-00ಗಳ ಕ್ರಾಸ್ ಮಾಡಿದ ಡಿ.ಡಿ.ಯನ್ನು ಲಗತ್ತಿಸಿ ಮೊಹರು ಮಾಡಿದ ಲಕೋಟೆಯಲ್ಲಿಟ್ಟು ಲಕೋಟೆಯ ಮೇಲೆ ವಾಹನದ ನಂಬರನ್ನು ದಪ್ಪ ಅಕ್ಷರದಲ್ಲಿ ನಮೂದಿಸುವುದು ಮತ್ತು ಟೆಂಡರ್‌ದಾರರ ವಿಳಾಸವನ್ನು ಸ್ಪಷ್ಟವಾಗಿ ಬರೆದು ಸಲ್ಲಿಸಬೇಕು. ಡಿ.ಡಿ. ಇಲ್ಲದಿರುವ ಟೆಂಡರನ್ನು ಮಾನ್ಯ ಮಾಡಲಾಗುವುದಿಲ್ಲ.

2) ದಿನಾಂಕ: 16.11.2005ರಂದು ಬಹಿರಂಗ ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಟೆಂಡರ್ ಲಕೋಟೆಗಳನ್ನು ಬಿಡ್‌ದಾರರ ಹಾಗೂ ಟೆಂಡರ್‌ದಾರರ ಸಮ್ಮುಖದಲ್ಲಿ ತೆರೆಯಲಾಗುವುದು. ಆಖೈರು ಬಿಡ್ ಅಥವಾ ಟೆಂಡರ್ ಮೊಬಲಗು ಇವುಗಳಲ್ಲಿ ಗರಿಷ್ಠ ಮೊತ್ತವನ್ನು ಅಂಗೀಕರಿಸಲಾಗುವುದು.

3) ಹರಾಜಿನಲ್ಲಿ ಭಾಗವಹಿಸುವವರು ರೂ.5000/- (ರೂ. ಐದು ಸಾವಿರ) ಮಾತ್ರ ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸುವುದು.

4) ಟೆಂಡರ್ ಹಾಕಿರುವವರು ಸಹ ಬಹಿರಂಗ ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸಿದಲ್ಲಿ ರೂ. 5000.00 ಠೇವಣಿ ಇಟ್ಟು ಹರಾಜಿನಲ್ಲಿ ಭಾಗವಹಿಸಬಹುದು.

5) ಯಶಸ್ವಿ ಬಿಡ್‌ದಾರರು/ ಟೆಂಡರ್‌ದಾರರು ಠೇವಣಿ ಮೊಬಲಗು ಹೊರತುಪಡಿಸಿ, ಗರಿಷ್ಟ ಬಿಡ್/ ಟೆಂಡರ್ ಮೊತ್ತದ ಶೇ. 25ರಷ್ಟು ಮೊಬಲಗು ಸ್ಥಳದಲ್ಲಿಯೇ ಪಾವತಿಸಬೇಕು. ತಪ್ಪಿದಲ್ಲಿ ಅವರು ನೀಡಿರುವ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಟೆಂಡರ್ ಹರಾಜನ್ನು ಸಂಬಂಧಿಸಿದ ಅಧಿಕಾರಿಯು ಅನುಮೋದಿಸಿದ ನಂತರ ಬಾಕಿ ಮೊತ್ತವನ್ನು ಮತ್ತು ನಿಯಮಾನುಸಾರ ತೆರಿಗೆಯನ್ನು ಈ ಕಛೇರಿಯ ತಿಳುವಳಿಕೆ ಪತ್ರ ಸ್ವೀಕರಿಸಿದ 10 ದಿನದೊಳಗೆ ಪಾವತಿಸಿ ತಮ್ಮ ಸ್ವಂತ ಖರ್ಚಿನಿಂದ ವಾಹನವನ್ನು ತೆಗೆದುಕೊಂಡು ಹೋಗತಕ್ಕದ್ದು. ತಪ್ಪಿದ್ದಲ್ಲಿ ಅವರು ಪಾವತಿಸಿದ ಒಟ್ಟು ಮೊತ್ತವನ್ನು ಮುಟ್ಟುಗೋಲು ಹಾಕಿಕೊಳ್ಳಲಾಗುವುದು. ಹಾಗೂ ಈ ಬಗ್ಗೆ ಯಾವುದೇ ಹಕ್ಕು ಅವರಿಗೆ ಇರುವುದಿಲ್ಲ.

6) ಯಶಸ್ವಿ ಬಿಡ್: ಟೆಂಡರ್‌ದಾರರು ತಮ್ಮ ಖರ್ಚಿನಲ್ಲಿ ವಾಹನದ ಮಾಲೀಕತ್ವ ಬದಲಾವಣೆ ಮಾಡಿಕೊಳ್ಳತಕ್ಕದ್ದು.

7) ಯಶಸ್ವಿ ಬಿಡ್: ಟೆಂಡರುದಾರರು ಹೊರತುಪಡಿಸಿ ಉಳಿದವರಿಗೆ ಠೇವಣಿ ಹಣ: ಡಿ.ಡಿ.ಯನ್ನು ಹರಾಜು ಪ್ರಕ್ರಿಯೆ ಮುಕ್ತಾಯವಾದ ನಂತರ ಅವರಿಂದ ಲಿಖಿತ ಬೇಡಿಕೆ ನೀಡಿದ ತರುವಾಯ ಹಿಂದಿರುಗಿಸಲಾಗುವುದು.

8) ಹರಾಜು ಕೈಗೊಳ್ಳುವ/ ರದ್ದುಪಡಿಸುವ/ ಮುಂದೂಡುವ ಹಾಗೂ ಬಿಡ್ ಅಂಗೀಕರಿಸುವ ಮತ್ತು ತಿರಸ್ಕರಿಸುವ ಹಕ್ಕು ಕಾಯ್ದಿರಿಸಲಾಗಿದೆ.

9) ಎಲ್ಲಾ ವಿಷಯಗಳಲ್ಲಿ ಉಪ ಕೃಷಿ ನಿರ್ದೇಶಕರು, (ವಾಣಿಜ್ಯ ಬೆಳೆಗಳು) ಶೇಷಾದ್ರಿ ರಸ್ತೆ, ಬೆಂಗಳೂರು ಇವರ ತೀರ್ಮಾನವೇ ಅಂತಿಮವಾಗಿರುತ್ತದೆ. ಈ ತೀರ್ಮಾನಕ್ಕೆ ಎಲ್ಲಾ ಬಿಡ್‌ದಾರರು/ ಟೆಂಡರ್‌ದಾರರು ಬದ್ಧರಾಗಿರಬೇಕಾಗಿರುತ್ತದೆ.

10) ವಾಹನವನ್ನು ಈಗ ಇದ್ದ ಪರಿಸ್ಥಿತಿಯಲ್ಲಿಯೇ ಹರಾಜು ಮಾಡಲಾಗುವುದು. ವಾಹನವನ್ನು ಕಛೇರಿ ಕೆಲಸದ ದಿನಗಳಲ್ಲಿ ಕಛೇರಿ ವೇಳೆಯಲ್ಲಿ ವೀಕ್ಷಿಸಬಹುದು.

ಉಪ ಕೃಷಿ ನಿರ್ದೇಶಕರು,
(ವಾಣಿಜ್ಯ ಬೆಳೆಗಳು), ಬೆಂಗಳೂರು.

ಪಿ.ಆರ್.542

## ಲೋಕೋಪಯೋಗಿ ಇಲಾಖೆ

## ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ

## ಟೆಂಡರ್ ಪ್ರಕಟಣೆ (ಎರಡು ಲಕೋಟೆ ಪದ್ಧತಿಯಲ್ಲಿ)

**ಸಂಖ್ಯೆ:ಇಎನ್‌ಹೆಚ್/ ಚಿ/ಸ.ಇ 2/ ಟೆಂ.ಪ್ರ./ ಐ.ಆರ್.ಕ್ಯೂ.ಪಿ./ 2005-06/2612, ದಿನಾಂಕ:23ನೇ ಸೆಪ್ಟೆಂಬರ್, 2005**

ಮೊಹರಾದ ಐಟಂವಾರು ದರದ ಟೆಂಡರುಗಳನ್ನು ಕೆಳಗೆ ಕಾಣಿಸಿದ ಕೆಲಸಕ್ಕೆ ಎರಡು ಲಕೋಟೆ ಪದ್ಧತಿಯಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದಂತೆ ದ್ವಿಪ್ರತಿಯಲ್ಲಿ ಕರ್ನಾಟಕ ಲೋಕೋಪಯೋಗಿ ಇಲಾಖೆಯಲ್ಲಿ ಹೆಸರನ್ನು ನೋಂದಾಯಿಸಿದ ಒಂದನೇ ದರ್ಜೆಯ ಅರ್ಹ ಗುತ್ತಿಗೆದಾರರಿಂದ ಹಾಗೂ ಕೇಂದ್ರ ಭೂಸಾರಿಗೆ ಮಂತ್ರಾಲಯದಿಂದ ಅನುಮೋದಿತ ಸಂಸ್ಥೆಗಳಿಂದ ಆಹ್ವಾನಿಸಲಾಗಿದೆ. ಎರಡು ಲಕೋಟೆ ಪದ್ಧತಿಯಲ್ಲಿ (1) ತಾಂತ್ರಿಕ ಬಿಡ್ (ಭಾಗ-1) ಮತ್ತು (2) ಆರ್ಥಿಕ ಬಿಡ್ (ಭಾಗ-2) ಗಳಾಗಿರುತ್ತವೆ. ಬಿಡ್‌ಗಳನ್ನು ಎರಡು ಭಾಗಗಳಲ್ಲಿ ಎರಡು ಮೊಹರಾದ ಹಾಗೂ ತಾಂತ್ರಿಕ ಬಿಡ್ ಮತ್ತು ಆರ್ಥಿಕ ಬಿಡ್ ಎಂದು ಪ್ರತ್ಯೇಕವಾಗಿ ನಮೂದಿಸಲ್ಪಟ್ಟ ಲಕೋಟೆಗಳನ್ನು ಮತ್ತೊಂದು ಮೊಹರಾದ ಲಕೋಟೆಯಲ್ಲಿಟ್ಟು ಹಾಗೂ ಕೆಲಸದ ಹೆಸರನ್ನು ನಮೂದಿಸಲ್ಪಟ್ಟು ಗುತ್ತಿಗೆದಾರರ ಪೂರ್ಣ ಅಂಚೆ ವಿಳಾಸದೊಂದಿಗೆ ಕೆಳಗೆ ಸಹಿ ಮಾಡಿರುವ ಅಧಿಕಾರಿಗಳಿಗೆ ವಿಳಾಸಿಸಿ ಸಲ್ಲಿಸುವುದು. ಪೂರ್ಣ ಪ್ರಮಾಣದ ಬಿಡ್‌ಗಳನ್ನು ಅಧೀಕ್ಷಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವೃತ್ತ, ಬೆಂಗಳೂರು ಹಾಗೂ ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ **ದಿನಾಂಕ: 07.11.2005ರಂದು ಸಾಯಂಕಾಲ 4.00 ಗಂಟೆಯವರೆಗೆ** ಕೆಪಿಡಬ್ಲ್ಯೂಡಿ ಕೋಡ್ ಭಾಗ-2, ಫಾರಂ ನಂ. ಪಿಡಬ್ಲ್ಯೂಜಿ 65 ಹಾಗೂ 66ರ ನಿಬಂಧನೆಗಳು, ಗುತ್ತಿಗೆ ಷೆಡ್ಯೂಲ್‌ನ ವಿಶೇಷ ನಿಬಂಧನೆಗಳು ಹಾಗೂ ಕರ್ನಾಟಕ ಸಾರ್ವಜನಿಕ ಸಂಗ್ರಹಣೆ ಪಾರದರ್ಶಕತೆ ಅಧ್ಯಾದೇಶ 2000 ನಿಯಮದ ನಿಬಂಧನೆಗೊಳಪಟ್ಟು ಸ್ವೀಕರಿಸಲಾಗುವುದು. ತಾಂತ್ರಿಕ ಬಿಡ್ ಭಾಗ-1 ನ್ನು ಈ ಕೆಳಗೆ ಕಾಣಿಸಿದ ದಿನಾಂಕದಂದು ಕಾರ್ಯನಿವಾಹಕ ಇಂಜಿನಿಯರ್, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಕಛೇರಿಯಲ್ಲಿ ತೆರೆಯಲಾಗುವುದು. ತಾಂತ್ರಿಕ ಬಿಡ್‌ನಲ್ಲಿ ಅರ್ಹರಾದಂಥ ಗುತ್ತಿಗೆದಾರರ ಆರ್ಥಿಕ ಬಿಡ್ ಲಕೋಟೆಗಳನ್ನು ಮಾತ್ರ ತೆರೆಯಲಾಗುತ್ತದೆ. ಈ ಕೆಳಗೆ ಕಾಣಿಸಿದ ದಿನಗಳಲ್ಲಿ ಯಾವುದಾದರೂ ರಜಾ ದಿನವಾದಲ್ಲಿ, ಮುಂದೆ ಸೂಕ್ತ ದಿನಾಂಕವನ್ನು ತಿಳಿಸಲಾಗುವುದು.

ಟೆಂಡರ್ ಕರೆ ಸಂಖ್ಯೆ ಮೊದಲನೇ ಕರೆ

| ಕ್ರ. ಸಂ. | ಕೆಲಸದ ಹೆಸರು | ಟೆಂಡರಿಗೆ ನಿಗದಿಪಡಿಸಿದ ಅಂದಾಜು ಮೊತ್ತ (ರೂ. ಲಕ್ಷಗಳಲ್ಲಿ) | ಇಡುಗಂಟು (ಇಎಂಡಿ) (ಮೊತ್ತ ರೂ. ಗಳಲ್ಲಿ) | ಖಾಲಿ ಟೆಂಡರ್ ಫಾರ್ಮಿನ ಬೆಲೆ ಸೆಟ್ಟಿಗೆ +ಟ್ಯಾಕ್ಸ್ ಮರು ಪಾವತಿಯಾಗದ | ಕೆಲಸದ ಸ್ವರೂಪ | ಕಾಮಗಾರಿ ಪೂರ್ಣಗೊಳಿಸುವ ಕಾಲಾವಧಿ (ಮಳೆಗಾಲ ಸಹಿತ) |
|---|---|---|---|---|---|---|
| 1 | 2 | 3 | 4 | 5 | 6 | 7 |
| 1. | ರಾಷ್ಟ್ರೀಯ ಹೆದ್ದಾರಿ-13ರ ಸೊಲ್ಲಾಪುರ-ಮಂಗಳೂರು ಸೆಕ್ಷನ್‌ನ ಕಿ.ಮೀ. 422 ರಿಂದ 430 ರವರೆಗೆ ಐ.ಆರ್.ಕ್ಯೂ.ಪಿ. ಕಾಮಗಾರಿ. | ರೂ.165.00 | ರೂ.1,65,000/- | ರೂ. 17000+12.5% ವ್ಯಾಟ್ | ಬಿ.ಎಂ. ಮತ್ತು ಎಸ್.ಡಿ.ಬಿ.ಸಿ. ಕಾಮಗಾರಿ | 6 ತಿಂಗಳು ಮಳೆಗಾಲ ಸಹಿತ |

**ಷರತ್ತುಗಳು:**

1) ಕೆಲಸಕ್ಕೆ ಬಿಡ್ ಮಾಡಲು ಆಸಕ್ತಿ ಇರುವ ಗುತ್ತಿಗೆದಾರರು ಅರ್ಜಿಯನ್ನು ಖಾಲಿ ಟೆಂಡರ್ ಫಾರಂಗೆ ನಿಗದಿಪಡಿಸಿರುವ ಮೊತ್ತವನ್ನು (ಹಿಂದಿರುಗಿಸಲಾಗದ) ನಗದು ಅಥವಾ ಡಿ.ಡಿ.ಯನ್ನು ಕಾರ್ಯನಿರ್ವಾಹಕ ಅಭಿಯಂತರು ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿಗೆ ಮತ್ತು ಚಿತ್ರದುರ್ಗದಲ್ಲಿ ಪಾವತಿಯಾಗುವಂತೆ, ಕೆಳಗೆ ಸಹಿ ಮಾಡಿರುವವರ ಕಛೇರಿಗೆ ಸಲ್ಲಿಸತಕ್ಕದ್ದು. ಗುತ್ತಿಗೆದಾರರು ಗುತ್ತಿಗೆದಾರರ ನೋಂದಾವಣಿ ಪತ್ರದ ಪ್ರತಿ, ಇತ್ತೀಚಿನ ಕರ್ನಾಟಕ ಮಾರಾಟ ತೆರಿಗೆ ತೀರುವಳಿ ಪ್ರಮಾಣ ಪತ್ರವನ್ನು (ಸಂಬಂಧಪಟ್ಟ ಇಲಾಖೆಯಿಂದ ಪಡೆದು) ಹಾಗೂ ಕಾಮಗಾರಿಗೆ ನಿಗದಿಪಡಿಸಿದ ಯಂತ್ರೋಪಕರಣಗಳ ಮಾಲಿಕತ್ವದ ಪ್ರಮಾಣ ಪತ್ರಗಳು, ಈ ಎಲ್ಲಾ ದಾಖಲೆಗಳನ್ನು, ವಿಭಾಗ ಮಟ್ಟದ ಅಧಿಕಾರಿಗಳಿಗೆ ಕಡಿಮೆಯಿಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಿದ ಪ್ರತಿಗಳನ್ನು ಅರ್ಜಿಯ ಜೊತೆಯಲ್ಲಿ ಕಡ್ಡಾಯವಾಗಿ ಸಲ್ಲಿಸತಕ್ಕದ್ದು. ತಪ್ಪಿದಲ್ಲಿ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2) **ಟೆಂಡರು ದಿನಾಂಕಗಳ ವಿವರಗಳು ಈ ಕೆಳಕಂಡಂತಿವೆ:**

| | | |
|---|---|---|
| ಅ) | ಖಾಲಿ ಟೆಂಡರ್ ಫಾರಂಗಳಿಗಾಗಿ ಅರ್ಜಿ ಸಲ್ಲಿಸುವ ಕೊನೆಯ ದಿನಾಂಕ | : 15.10.2005 (ಕಛೇರಿ ವೇಳೆಯಲ್ಲಿ) |
| ಆ) | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ | : 24.10.2005 ರಿಂದ 25.10.2005 ರವರೆಗೆ (ಕಛೇರಿ ವೇಳೆಯಲ್ಲಿ) |
| ಇ) | ಪೂರ್ತಿಗೊಳಿಸಿದ ಮೊಹರಾದ ಟೆಂಡರುಗಳನ್ನು ಸಲ್ಲಿಸುವ ದಿನಾಂಕ | : 07.11.2005, ಮಧ್ಯಾಹ್ನ 4.00 ಗಂಟೆಯವರೆಗೆ ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ |
| ಈ) | ತಾಂತ್ರಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 07.11.2005, ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |
| ಉ) | ತಾಂತ್ರಿಕವಾಗಿ ಅರ್ಹವಾದ ತಾಂತ್ರಿಕ ಬಿಡ್‌ಗಳ ಆರ್ಥಿಕ ಬಿಡ್‌ಗಳನ್ನು ತೆರೆಯುವ ದಿನಾಂಕ | 14.11.2005 ಸಾಯಂಕಾಲ 5.00 ಅಥವಾ ಅನಂತರ ತಿಳಿಸುವ ಇನ್ನಾವುದೇ ದಿನಾಂಕ ಮತ್ತು ಸಮಯ. |

**ತಾಂತ್ರಿಕ ಬಿಡ್‌ಗಳಿಗೆ ಷರತ್ತುಗಳು:**

1) ಇ.ಎಂ.ಡಿ. ಮೊತ್ತವನ್ನು ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಪಡೆದು ಡಿ.ಡಿ.: ಎಫ್.ಡಿ.ಆರ್: ಪೇ ಆರ್ಡರ್: ರಾಷ್ಟ್ರೀಕೃತ ಬ್ಯಾಂಕ್ ಹಾಗೂ ಷೆಡ್ಯೂಲ್ಡ್ ಬ್ಯಾಂಕ್‌ಗಳಿಂದ ಪಡೆದ ಬ್ಯಾಂಕ್ ಗ್ಯಾರಂಟಿ ಅಥವಾ ರಾಷ್ಟ್ರೀಯ ಉಳಿತಾಯ ಪತ್ರ (ಕಾರ್ಯಪಾಲಕ ಅಭಿಯಂತರರು, ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ ಇವರ ಹೆಸರಿನಲ್ಲಿ ಒತ್ತೆ ಇಡತಕ್ಕದ್ದು) ವನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಸಲ್ಲಿಸತಕ್ಕದ್ದು. ಇ.ಎಂ.ಡಿ.ಯನ್ನು ಬೇರಾವುದೇ ಹೆಸರಿನಲ್ಲಿ ಪಡೆದಲ್ಲಿ ಅಥವಾ ಒತ್ತೆ ಇಡಲಾದಲ್ಲಿ ತಾಂತ್ರಿಕ ಬಿಡ್‌ಗಳನ್ನು ಯಾವುದೇ ವಿಚಾರಣೆ ಅಥವಾ ವಿವರಣೆಯನ್ನು ಮಾಡದೆ, ಅನರ್ಹಗೊಳಿಸಲಾಗುವುದು. ಬ್ಯಾಂಕ್ ಗ್ಯಾರಂಟಿಯು ಕಡ್ಡಾಯವಾಗಿ ಟೆಂಡರ್ ಫಾರಂನಲ್ಲಿರುವ ಪಿ.ಡಬ್ಲ್ಯೂ.ಜಿ.66 ರಕ್ಕೆ ಅನುಗುಣವಾಗಿರತಕ್ಕದ್ದು.

2) ಈ ಟೆಂಡರ್‌ನಲ್ಲಿ ಕರೆಯಲಾಗಿರುವ ಕಾಮಗಾರಿಯ ಡಿಫೆಕ್ಟ್ ಲಯಾಬಿಲಿಟಿ ಸಮಯವು ಕಾಮಗಾರಿ ಪೂರ್ಣಗೊಳಿಸಿದ ದಿನಾಂಕದಿಂದ ಒಂದು ವರ್ಷವಾಗಿರುತ್ತದೆ. ಕಾಮಗಾರಿಯಲ್ಲಿ ನಿರ್ವಹಿಸಬೇಕಾದ ಕೆಲಸಗಳು ಅತ್ಯುನ್ನತ ಗುಣಮಟ್ಟದಿಂದ ಕೂಡಿದ್ದು ಒಂದು ವರ್ಷದವರೆಗೆ ಯಾವುದೇ ರಿಪೇರಿಯ ಸಾಧ್ಯತೆಗಳಿರುವುದಿಲ್ಲ. ಈ ಮೇಲ್ಕಂಡ ರೀಚಿನ ಕಾಮಗಾರಿಗೆ ಈ ಒಂದು ವರ್ಷದ ಅವಧಿಯಲ್ಲಿ ಯಾವುದಾದರೂ ರಿಪೇರಿಯ ಅವಶ್ಯಕತೆ ಬಿದ್ದಲ್ಲಿ ಗುತ್ತಿಗೆದಾರರು: ಸಂಸ್ಥೆಗಳವರು ಸದರಿ ರಿಪೇರಿ ಅಥವಾ ಮರು ನಿರ್ಮಾಣವನ್ನು ಗುತ್ತಿಗೆದಾರರ: ಸಂಸ್ಥೆಯ ಸ್ವಂತ ವೆಚ್ಚದಲ್ಲಿ ಮಾಡತಕ್ಕದ್ದು. ಇ.ಎಂ.ಡಿ.: ಎಸ್.ಡಿ. ಪರಿಕರಗಳನ್ನು ಮೇಲಿನ ಷರತ್ತಿಗನುಗುಣವಾಗಿ ಸಲ್ಲಿಸತಕ್ಕದ್ದು.

3) ಪ್ರತಿ ಗುತ್ತಿಗೆದಾರರು ಈ ಕೆಳಕಂಡ ಯಂತ್ರೋಪಕರಣಗಳ ಮಾಲಿಕತ್ವವನ್ನು ಹೊಂದಿರಬೇಕು ಹಾಗೂ ತಾಂತ್ರಿಕ ಬಿಡ್‌ನ ಜೊತೆಯಲ್ಲಿ ಸಂಬಂಧಪಟ್ಟ ಮಾಲಿಕತ್ವದ ಸಾಕ್ಷಿಯನ್ನು ಈ ಕೆಳಕಂಡಂತೆ ಸಲ್ಲಿಸತಕ್ಕದ್ದು. ಮೇಲಿನ ಮಾಲಿಕತ್ವದ ಸಾಕ್ಷಿಗಳಿಲ್ಲದ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.

| ಕ್ರಮ ಸಂಖ್ಯೆ | ಯಂತ್ರೋಪಕರಣಗಳು | ಬೇಕಾದ ಸಂಖ್ಯೆ | ಮಾಲಿಕತ್ವದ ಪುರಾವೆಗಳು |
|---|---|---|---|
| 1. | 40/60 ಟಿ.ಪಿ.ಹೆಚ್. ಅಥವಾ ಹೆಚ್ಚಿನ ಸಾಮರ್ಥ್ಯದ ಹಾಟ್‌ಮಿಕ್ಸ್ ಪ್ಲಾಂಟ್ (ಎಂ.ಓ.ಆರ್.ಟಿ. ಮತ್ತು ಹೆಚ್ ಸ್ಪೆಸಿಫಿಕೇಷನ್‌ಗೆ ಅನುಗುಣವಾಗಿ) | ಒಂದು (1) | ಖರೀದಿಸಿದ ಇನ್‌ವಾಯ್ಸ್: ಸೇಲ್‌ಡೀಡ್ (ಖರೀದಿದಾರರಿಂದ ಪಡೆದ ಮೂಲ ಇನ್‌ವಾಯ್ಸ್‌ನೊಂದಿಗೆ) |
| 2. | ಪೇವರ್ ಫಿನೀಷರ್ ಸೆನ್ಸಾರ್‌ನೊಂದಿಗೆ | ಒಂದು (1) | -ಸದರಿ- |
| 3. | ವೈಬ್ರೇಟರಿ ರೋಲರ್ | ಒಂದು (1) | -ಸದರಿ- |
| 4. | ಸ್ಟ್ಯಾಟಿಕ್ ರೋಡ್‌ರೋಲರ್ | ಎರಡು (2) | -ಸದರಿ- |
| 5. | ಮೆಕ್ಯಾನಿಕಲ್ ಸ್ಪ್ರೇಯರ್ | ಎರಡು (2) | -ಸದರಿ- |
| 6. | ಟಿಪ್ಪರ್‌ಗಳು | ನಾಲ್ಕು (4) | ಆರ್.ಟಿ.ಓ. ರವರಿಂದ ಪಡೆದ ರಿಜಿಸ್ಟ್ರೇಷನ್ ಸರ್ಟಿಫಿಕೇಟ್. |
| 7. | ಎಕ್ಸ್‌ಕವೇಟರ್ | ಒಂದು (1) | ಮಾಲಿಕತ್ವದ ಪ್ರಮಾಣ ಪತ್ರ. |

1. ಪ್ರತಿ ಗುತ್ತಿಗೆದಾರರು ಟೆಂಡರ್‌ಗಿಟ್ಟ ಮೊತ್ತದ ಶೇಕಡ 30ರಷ್ಟು ಪ್ರಮಾಣದ ಇದೇತರಹದ ಕೆಲಸವನ್ನು ಸಮರ್ಪಕವಾಗಿ ಕಳೆದ ಐದು ಆರ್ಥಿಕ ವರ್ಷದ ಬ್ಲಾಕ್ ಅವಧಿಯಲ್ಲಿ ಮುಗಿಸಿರಬೇಕು. ಅಥವಾ ಗುತ್ತಿಗೆದಾರರು ಶೇಕಡ 30ರಷ್ಟು ಪ್ರಮಾಣದ ಇದೇ ತರಹದ ಒಂದೇ ಕೆಲಸದ ಬಿಲ್ಲನ್ನು ಪ್ರಸ್ತುತ ಆರ್ಥಿಕ ವರ್ಷದಲ್ಲಿ ಪಡೆದಿರಬೇಕು. ಇದಕ್ಕೆ ಸಂಬಂಧಪಟ್ಟಂತೆ ಅನುಭವದ ಪ್ರಮಾಣ ಪತ್ರದಲ್ಲಿ ಮೇಲಿನ ಅಂಶ ಹಾಗೂ ಕಾಮಗಾರಿಯಲ್ಲಿ ನಿರ್ವಹಿಸಿದ ಕೆಲಸದ ವಿವರಗಳು ಇರತಕ್ಕದ್ದು. ಇಲ್ಲವಾದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
2. ಆರ್ಥಿಕ ಸಾಮರ್ಥ್ಯದ ಸಾಕ್ಷಿಯು, ಟೆಂಡರಿಗಿಟ್ಟ ಮೊತ್ತದ ಶೇಕಡಾ 30ರಷ್ಟು ಪ್ರಮಾಣದ ಯಾವುದೇ ಷೆಡ್ಯೂಲ್ಡ್ ಬ್ಯಾಂಕಿನ **"ಲೈನ್ ಆಫ್ ಕ್ರೆಡಿಟ್‌ಅನ್ನು"** ಕಡ್ಡಾಯವಾಗಿ ತಾಂತ್ರಿಕ ಬಿಡ್‌ನಲ್ಲಿ ನಿಗದಿಪಡಿಸಿದ ಪ್ರೊಫಾರ್ಮಾದಲ್ಲಿ ಸಲ್ಲಿಸತಕ್ಕದ್ದು. **"ಲೈನ್ ಆಫ್ ಕ್ರೆಡಿಟ್‌ಅನ್ನು"** ಸಲ್ಲಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳು ಅನರ್ಹಗೊಳ್ಳುತ್ತವೆ.
3. ತಾಂತ್ರಿಕ ಬಿಡ್ ಜೊತೆಯಲ್ಲಿ ಲಗತ್ತಿಸುವ ಎಲ್ಲಾ ದಾಖಲಾತಿಗಳನ್ನು ವಿಭಾಗಮಟ್ಟದ ಅಧಿಕಾರಿಗೆ ಕಡಿಮೆ ಇಲ್ಲದ ಗೆಜೆಟೆಡ್ ಅಧಿಕಾರಿಯಿಂದ ದೃಢೀಕರಿಸಲ್ಪಟ್ಟಿರಬೇಕು. ಇಲ್ಲವಾದಲ್ಲಿ ಬಿಡ್‌ಗಳು ಅನರ್ಹಗೊಳ್ಳುತ್ತವೆ. ಮೂಲ ದಾಖಲಾತಿಗಳನ್ನು ಟೆಂಡರ್ ಪ್ರಕ್ರಿಯೆಯ ಯಾವುದೇ ಮಟ್ಟದಲ್ಲಿ ಪರಿಶೀಲನೆಗಾಗಿ ಕೇಳಿದಾಗ ಒದಗಿಸತಕ್ಕದ್ದು. ಮೂಲ ದಾಖಲಾತಿಗಳನ್ನು ಪರಿಶೀಲನೆಗಾಗಿ ಕೇಳಿದಾಗ ಒದಗಿಸದಿದ್ದಲ್ಲಿ ತಾಂತ್ರಿಕ ಬಿಡ್‌ಗಳನ್ನು ಅನರ್ಹಗೊಳಿಸಲಾಗುವುದು.
4. ಸಂಬಂಧಪಟ್ಟ ದಾಖಲಾತಿಗಳನ್ನು ಮತ್ತು ವಿವರಣೆಗಳನ್ನು ತಾಂತ್ರಿಕ ಬಿಡ್ ಜೊತೆಯಲ್ಲಿ ಒದಗಿಸತಕ್ಕದ್ದು. ಕಂಪನಿಯ ವಿವರಗಳು: ಏಜೆನ್ಸಿಗಳು: ಸಂಸ್ಥೆಯ ಪ್ರೊಫೈಲ್‌ಅನ್ನು ಲಗತ್ತಿಸತಕ್ಕದ್ದು.
5. ಜಾಯಿಂಟ್ ವೆಂಚರ್ ಟೆಂಡರ್‌ಗಳನ್ನು ಅಂಗೀಕರಿಸುವುದಿಲ್ಲ.
6. ಯಾವುದೇ ಅಥವಾ ಎಲ್ಲಾ ಟೆಂಡರ್‌ಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಅಧಿಕಾರಿಗಳಿಗೆ ಇರುತ್ತದೆ.
7. ಕರಾರುಗಳನ್ನೊಳಗೊಂಡ ಟೆಂಡರುಗಳನ್ನು ಸ್ವೀಕೃತಿಗಾಗಿ ಪರಿಗಣಿಸುವುದಿಲ್ಲ.
8. ಮೇಲಿನ ಕೆಲಸಗಳ ಬಗ್ಗೆ ಯಾವುದೇ ಮಾಹಿತಿಯನ್ನು ಕೆಳಗೆ ಸಹಿ ಮಾಡಿದವರ ಕಛೇರಿಯಿಂದ ಕೆಲಸದ ವೇಳೆಯಲ್ಲಿ ಪಡೆಯಬಹುದು.

**ಬಿ. ಪ್ರಭಾಕರಶೆಟ್ಟಿ**

ಪಿ.ಆರ್.543

ಕಾರ್ಯಪಾಲಕ ಅಭಿಯಂತರು,
ರಾಷ್ಟ್ರೀಯ ಹೆದ್ದಾರಿ ವಿಭಾಗ, ಚಿತ್ರದುರ್ಗ.

## ಮುಖ್ಯ ಇಂಜಿನಿಯರ್‌ರವರ ಕಛೇರಿ, ಸಂಪರ್ಕ ಮತ್ತು ಕಟ್ಟಡಗಳು (ದ), ಬೆಂಗಳೂರು

## ಪ್ರಕಟಣೆ

### ಸಂಖ್ಯೆ: ಮುಇಂ: ಸಂಕದ: ಉಗ್ರಾಣ: ಜೆರಾಕ್ಸ್‌ಪೇಪರ್: ದರಪಟ್ಟಿ:2005-06

**ವಿಷಯ:** 2005-06ನೇ ಸಾಲಿಗೆ ಜೆರಾಕ್ಸ್ ಪೇಪರ್ ಸರಬರಾಜು ಮಾಡಲು ದರಪಟ್ಟಿ ಸಲ್ಲಿಸುವ ಬಗ್ಗೆ.

ಕೇಂದ್ರ ಕಛೇರಿಯ ಉಪಯೋಗಕ್ಕೆ ಬೇಕಾಗಿರುವ ಜೆರಾಕ್ಸ್ ಪೇಪರ್‌ನ ಸರಬರಾಜಿಗಾಗಿ ಇಚ್ಛಿತ ಸರಬರಾಜುದಾರರುಗಳಿಂದ ಮೊಹರು ಮಾಡಿದ ಕೊಟೇಷನ್‌ಗಳನ್ನು ಕರೆಯಲಾಗಿದೆ. ಇಚ್ಛಿತ ಸರಬರಾಜುದಾರರು ಈ ಕೆಳಕಂಡ ಮಾದರಿಯ ಅಳತೆಯ ಜೆರಾಕ್ಸ್ ಪೇಪರ್ ಸರಬರಾಜಿಗಾಗಿ ದರಗಳನ್ನು ಪ್ರತಿ ರೀಮ್‌ಗೆ ಸಲ್ಲಿಸುವುದು.

| ಕ್ರ.ಸಂ. | ಪೇಪರಿನ ಅಳತೆ | ಮಾದರಿ | | |
|---|---|---|---|---|
| | | ಜೆ.ಕೆ. | ಟಿ.ಎನ್.ಪಿ.ಎಲ್. | ಸ್ಪಿಂಟ್ |
| 1. | ಜೆರಾಕ್ಸ್ ಪೇಪರ್ ಎ4 ಸೈಜ್ | | | |
| 2. | ಜೆರಾಕ್ಸ್ ಪೇಪರ್ ಎ3 ಸೈಜ್ | | | |
| 3. | ಜೆರಾಕ್ಸ್ ಪೇಪರ್ ಎಫ್‌ಸಿ ಸೈಜ್ | | | |

ಕೊಟೇಷನ್‌ದಾರರು ನೊಂದಾಯಿತ ಮಾರಾಟ ತೆರಿಗೆದಾರರಾಗಿರಬೇಕು ಮತ್ತು 2005-06ನೇ ಸಾಲಿನಲ್ಲಿ ಈ ಕಛೇರಿಯಿಂದ ಅವಶ್ಯಕತೆಗನುಸಾರವಾಗಿ ನೀಡುವ ಸರಬರಾಜು ಆದೇಶಗಳ ರೀತ್ಯಾ 50 ರೀಮ್ ಜೆರಾಕ್ಸ್ ಪೇಪರನ್ನು ವಿಳಂಬವಿಲ್ಲದೇ ಸರಬರಾಜು ಮಾಡತಕ್ಕದ್ದು.

ಕೊಟೇಷನ್‌ಗಳನ್ನು ಈ ಕಛೇರಿಗೆ ದಿನಾಂಕ: 24.10.2005ರೊಳಗೆ ಸಲ್ಲಿಸುವುದು. ಷರತ್ತಿನ ಕೊಟೇಷನ್‌ಗಳನ್ನು ಪರಿಗಣಿಸುವುದಿಲ್ಲ.

ಮುಖ್ಯ ಇಂಜಿನಿಯರ್,
ಸಂಪರ್ಕ ಮತ್ತು ಕಟ್ಟಡಗಳು (ದ), ಬೆಂಗಳೂರು.

ಪಿ.ಆರ್.545

## ಔಷಧ ನಿಯಂತ್ರಣ ಇಲಾಖೆ

## ಅಧೀಕ್ಷಕರ ಕಛೇರಿ, ಔಷಧ ಪರೀಕ್ಷಾ ಪ್ರಯೋಗಾಲಯ, ಅರಮನೆ ರಸ್ತೆ, ಬೆಂಗಳೂರು-560 001

## ಟೆಂಡರ್ ಪ್ರಕಟಣೆ

### ಸಂಖ್ಯೆ: ಔನಿಇ: ಔಪಪ್ರ: ಟಿಐಎ: 4: 2005-06, ದಿನಾಂಕ: 22ನೇ ಸೆಪ್ಟೆಂಬರ್, 2005

ಅಧಿಕೃತ ಉತ್ಪಾದಕರು, ವಿತರಕರಿಂದ ವಾಟರ್ ಪ್ಯೂರಿಫಿಕೇಷನ್ ಸಿಸ್ಟಮನ್ನು ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು ಇಲ್ಲಿಗೆ ಪೂರೈಸಲು ಮೊಹರಾದ ಟೆಂಡರನ್ನು ಆಹ್ವಾನಿಸಲಾಗಿದೆ. ಟೆಂಡರ್ ನಮೂನೆ ಶುಲ್ಕ ರೂ.66-00 ಶೇ.10.2 ಸೇವಾ ಶುಲ್ಕ ಟೆಂಡರ್ ನಮೂನೆಗಳನ್ನು ಮಾರಾಟ ಮಾಡಲು ಕೊನೆಯ ದಿನಾಂಕ: 26.10.2005ರಂದು 4 ಘಂಟೆಯವರೆಗೆ, ಟೆಂಡರ್ ಸ್ವೀಕರಿಸಲು ಕೊನೆಯ ದಿನಾಂಕ: 28.10.2005ರ 4 ಘಂಟೆಯವರೆಗೆ ಮತ್ತು ತೆರೆಯುವುದು ದಿನಾಂಕ: 29.10.2005ರ 11.00 ಘಂಟೆಗೆ. ದಿನಾಂಕ: 29.10.2005ರಂದು ರಜೆಯೆಂದು ಘೋಷಿಸಲ್ಪಟ್ಟರೆ, ಮುಂದಿನ ಕೆಲಸದ ದಿನದಂದು ಟೆಂಡರ್ ತೆರೆಯಲಾಗುವುದು. ಟೆಂಡರ್ ಫಾರಂಗಳನ್ನು ದಿನಾಂಕ: 04.10.2005ರಂದು ಮಾರಾಟ ಮಾಡಲಾಗುವುದು. ಇತರೆ ವಿವರಗಳನ್ನು ಸದರಿ ಕಛೇರಿಯಿಂದ ಪಡೆಯಬಹುದು.

| ಉಪಕರಣದ ಹೆಸರು | ಪರಿಮಾಣ | ಇ.ಎಂ.ಡಿ. ರೂ. |
|---|---|---|
| ಹೆಚ್.ಪಿ.ಎಲ್.ಸಿ. ವಾಟರ್ ಪ್ಯೂರಿಫಿಕೇಷನ್ ಸಿಸ್ಟಮ್ | 1 ಸಂಖ್ಯೆ | 6,600-00 |

ಸದಸ್ಯ ಕಾರ್ಯದರ್ಶಿ,
ಟೆಂಡರ್ ಆಹ್ವಾನ ಪ್ರಾಧಿಕಾರ ಮತ್ತು ಟೆಂಡರ್
ಅಂಗೀಕರಿಸುವ ಪ್ರಾಧಿಕಾರ ಸಮಿತಿ ಮತ್ತು ಅಧೀಕ್ಷಕರು,
ಔಷಧ ಪರೀಕ್ಷಾ ಪ್ರಯೋಗಾಲಯ, ಬೆಂಗಳೂರು-1.

ಪಿ.ಆರ್.546

## ಕರ್ನಾಟಕ ಲೋಕಾಯುಕ್ತ ಕಛೇರಿ, ಬೆಂಗಳೂರು

## ಬಹಿರಂಗ ಸಾರ್ವಜನಿಕ ಹರಾಜು ಪ್ರಕಟಣೆ

### ಸಂಖ್ಯೆ: ಲೋಕ್/ ಆರ್.ಕೆ.-1/ ಸ್ಟೋರ್ಸ್-27/ 2004-05, 2005-06, ಬೆಂಗಳೂರು, ದಿನಾಂಕ:19ನೇ ಸೆಪ್ಟೆಂಬರ್, 2005

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಕರ್ನಾಟಕ ಲೋಕಾಯುಕ್ತ ಕಛೇರಿ, ಬಹುಮಹಡಿಗಳ ಕಟ್ಟಡ, ಬೆಂಗಳೂರು ಕಛೇರಿಯಲ್ಲಿರುವ ಈ ಕೆಳಕಂಡ ಅನುಪಯುಕ್ತ ಬಿಡಿಭಾಗಗಳು, ಟೈರ್ ಮತ್ತು ಟ್ಯೂಬ್‌ಗಳನ್ನು ಬಹಿರಂಗ ಹರಾಜು ಮಾಡಲು ತೀರ್ಮಾನಿಸಲಾಗಿದೆ.

| ಕ್ರ.ಸಂ. | ವಸ್ತುಗಳ ವಿವರ | ಹರಾಜು ನಡೆಯುವ ಸ್ಥಳ |
|---|---|---|
| 1. | ಲಘು ವಾಹನಗಳಿಗೆ ಉಪಯೋಗಿಸಲ್ಪಟ್ಟ ಹಳೆಯ ಬಿಡಿಭಾಗಗಳು. | ಕರ್ನಾಟಕ ಲೋಕಾಯುಕ್ತ ಪ್ರಧಾನ ಕಛೇರಿ, ಬಹುಮಹಡಿ ಕಟ್ಟಡ, ಬೆಂಗಳೂರು. |
| 2. | ಉಪಯೋಗಿಸಲ್ಪಟ್ಟ ಹಳೆಯ ಟೈರುಗಳು | -ಸಹ- |
| 3. | ಉಪಯೋಗಿಸಲ್ಪಟ್ಟ ಹಳೆಯ ಟ್ಯೂಬ್‌ಗಳು | -ಸಹ- |

### ಹರಾಜಿನ ಷರತ್ತುಗಳು

1) ಹರಾಜಿನಲ್ಲಿ ಭಾಗವಹಿಸಲು ಆಸಕ್ತಿಯುಳ್ಳ ಪ್ರತಿಯೊಬ್ಬ ವ್ಯಕ್ತಿಯು ರೂ.1000/- ಗಳ ಠೇವಣಿಯನ್ನು ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಇವರ ಹೆಸರಿನಲ್ಲಿ ನಗದು ಮುಖಾಂತರ ಹರಾಜು ನಡೆಯುವ ಸ್ಥಳದಲ್ಲಿಯೇ ಪಾವತಿ ಮಾಡಿ ಹೆಸರುಗಳನ್ನು ನೊಂದಾಯಿಸಬೇಕು.

2) ಹರಾಜು ಮಾರಾಟವು ದಿನಾಂಕ: 27.10.2005ರಂದು ಬೆಳಿಗ್ಗೆ 11 ಗಂಟೆಗೆ ಮೇಲೆ ತಿಳಿಸಿದ ಕಛೇರಿ ಆವರಣದಲ್ಲಿ ಪ್ರಾರಂಭವಾಗುವುದು. ಆಸಕ್ತಿಯುಳ್ಳವರು ಸಾರ್ವತ್ರಿಕ ರಜೆಯನ್ನು ಹೊರತುಪಡಿಸಿ ಬೆಳಿಗ್ಗೆ 11 ಘಂಟೆಯಿಂದ ಸಂಜೆ 4 ಘಂಟೆವರೆಗೆ ಹಳೆಯ ಬಿಡಿಭಾಗಗಳು/ ಟೈರು ಮತ್ತು ಟ್ಯೂಬ್‌ಗಳನ್ನು ಪರಿವೀಕ್ಷಿಸಬಹುದು.

3) ನಿಗದಿಪಡಿಸಿರುವ ಠೇವಣಿ ಹಣವನ್ನು ಪಾವತಿಸಿದವರು ಮಾತ್ರ ಹರಾಜಿನಲ್ಲಿ ಭಾಗವಹಿಸಿ ಬಿಡ್ ಅನ್ನು ಕೂಗಬೇಕು.

4) ಹರಾಜಿನಲ್ಲಿ ಅತಿ ಹೆಚ್ಚು ಮೊಬಲಗಿನ ಸವಾಲುದಾರರ ಪರವಾಗಿ ಹರಾಜನ್ನು ಬಿಟ್ಟುಕೊಡಲಾಗುವುದು ಮತ್ತು ಉಳಿದ ಠೇವಣಿದಾರರಿಗೆ ಹರಾಜು ಮುಗಿದ ನಂತರ ಸ್ಥಳದಲ್ಲಿಯೇ ಠೇವಣಿ ಹಣವನ್ನು ಹಿಂದಿರುಗಿಸಲಾಗುವುದು.

5) ಹರಾಜನ್ನು ಅಂಗೀಕರಿಸುವ ಮತ್ತು ತಿರಸ್ಕರಿಸುವ ಅಧಿಕಾರ ನಿಬಂಧಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ರವರ ಅಂತಿಮ ತೀರ್ಮಾನಕ್ಕೆ ಸೇರಿರುತ್ತದೆ. ಹಾಗೂ ಹರಾಜನ್ನು ಯಾವುದಾದರೂ ಕಾರಣಾಂತರಗಳಿಂದ ಮುಂದೂಡುವ ಹಕ್ಕುಳ್ಳವರಾಗಿರುತ್ತಾರೆ.

6) ಹರಾಜು ಮೌಲ್ಯದ ಪೂರಾ ಹಣವನ್ನು ಅದೇ ದಿನ ನಗದಾಗಿ ಪಾವತಿಸತಕ್ಕದ್ದು. ಹಾಗೂ ಸದರಿ ಹರಾಜು ವಸ್ತುಗಳನ್ನು ಆ ದಿನದಂದೇ ತೆರವುಗೊಳಿಸುವುದು.

7) ಸರ್ಕಾರಕ್ಕೆ ಕಟ್ಟಬೇಕಾದ ಯಾವುದೇ ತರಹದ ತೆರಿಗೆಯನ್ನು ಹರಾಜು ಪಡೆದವರೇ ಪಾವತಿಸಬೇಕು.

8) ಹರಾಜು ಅಂಗೀಕರಿಸಿದ ದಿನದಿಂದ ಸಾಮಗ್ರಿಗಳ ಉಸ್ತುವಾರಿಗೆ ಹರಾಜು ಪಡೆದವರೇ ಜವಾಬ್ದಾರರಾಗಿರುತ್ತಾರೆ.

9) ಹೆಚ್ಚಿನ ವಿವರಗಳನ್ನು ಉಪ ನಿಬಂಧಕರು (ಆಡಳಿತ), ಕರ್ನಾಟಕ ಲೋಕಾಯುಕ್ತ, ಬಹುಮಹಡಿ ಕಟ್ಟಡ, ಡಾ: ಬಿ.ಆರ್. ಅಂಬೇಡ್ಕರ್ ವೀಧಿ, ಬೆಂಗಳೂರು ಇಲ್ಲಿ ವೈಯಕ್ತಿಕವಾಗಿ ಸಂಪರ್ಕಿಸಿ ಮಾಹಿತಿ ಪಡೆಯಬಹುದಾಗಿದೆ.

ನಿಬಂಧಕರು,
ಕರ್ನಾಟಕ ಲೋಕಾಯುಕ್ತ, ಬೆಂಗಳೂರು.

ಪಿ.ಆರ್.547

## ಜಲ ಸಂಪನ್ಮೂಲ ಇಲಾಖೆ

## ಕಾರ್ಯಪಾಲಕ ಅಭಿಯಂತರರ ಕಛೇರಿ, ನಂ.4, ಬಿಆರ್‌ಎಲ್‌ಬಿಸಿ ವಿಭಾಗ, ಭದ್ರಾವತಿ

## ಟೆಂಡರು ತಿದ್ದುಪಡಿ ಮತ್ತು ಅವಧಿ ವಿಸ್ತರಣೆ-6

**ವಿಷಯ :** ಭದ್ರಾ ಕಾಲುವೆಗಳ ಆಧುನೀಕರಣದ ಕಾಮಗಾರಿಗಳು.

**ಉಲ್ಲೇಖ :**
1. ಈ ಕಛೇರಿಯ ಅಲ್ಪಾವಧಿ ಟೆಂಡರ್ ಪ್ರಕಟಣೆ ಸಂಖ್ಯೆ: ಬಿಡಿಯನ್-4: ಪಿಬಿ-1: ಟೆಂಡರ್ ಪ್ರಕಟಣೆ: 2005-06: 33:12: ದಿನಾಂಕ: 04.04.2005.
2. ಈ ಕಛೇರಿಯ ಟೆಂಡರ್ ಅವಧಿ ವಿಸ್ತರಣೆ-1, ಪ್ರಕಟಣೆ ನಂ. ಬಿಡಿಯನ್-4: ಪಿಬಿ-1; ಟೆಂಡರು ಪ್ರಕಟಣೆ: 2005-06, 249: ದಿನಾಂಕ: 21.04.2005.
3. -ಸಮ- 2005-06 : 489: ದಿನಾಂಕ: 30.04.2005.
4. -ಸಮ- 2005-06 : 828: ದಿನಾಂಕ: 30.05.2005.
5. -ಸಮ- 2005-06 : 270: ದಿನಾಂಕ: 11.07.2005.
6. -ಸಮ- 2005-06 : 1841: ದಿನಾಂಕ: 25.08.2005.

ಉಲ್ಲೇಖಿತ ಪತ್ರ (1)ರಲ್ಲಿ ಹೊರಡಿಸಿರುವ (24 ಕಾಮಗಾರಿಗಳಿಗೆ ಶೇಕಡವಾರು) ಅಲ್ಪಾವಧಿ ಟೆಂಡರು ಪ್ರಕಟಣೆಯು ಮುಂದುವರೆದಂತೆ, ಉಲ್ಲೇಖ (2)ರಿಂದ (6)ರ ತನಕ ಟೆಂಡರ್ ಅವಧಿ ವಿಸ್ತರಣೆಯ ಪ್ರಕಟಣೆಗಳನ್ನು ಹೊರಡಿಸಲಾಗಿತ್ತು. ಉಲ್ಲೇಖ (1)ರಲ್ಲಿ ಹೊರಡಿಸಿರುವ ಟೆಂಡರ್ ಪ್ರಕಟಣೆಯಲ್ಲಿ ಪ್ರಕಟಿಸಿರುವ ಕಾಮಗಾರಿಗಳ ಕ್ರಮ ಸಂಖ್ಯೆ 1, 2, 17, 20, 21, 22 ಮತ್ತು 23 ಇವುಗಳನ್ನು ರದ್ದುಗೊಳಿಸಲಾಗಿದೆ. ಹಾಗೂ ಕಾಮಗಾರಿಗಳ ಕ್ರಮ ಸಂಖ್ಯೆ: 3, 4, 5, 6, 7, 8, 9, 10, 11, 12, 13, 14, 15, 16, 18, 19 ಮತ್ತು 24 ಇವುಗಳನ್ನು ಈ ಕೆಳಗಿನಂತೆ ಕನ್ನಡಕ್ಕೆ ತರ್ಜುಮೆ ಅವಧಿ ವಿಸ್ತರಣೆ ಹಾಗೂ ತಿದ್ದುಪಡಿಯೊಂದಿಗೆ ಪ್ರಕಟಣೆ ಹೊರಡಿಸಲಾಗಿದೆ.

| | | |
|---|---|---|
| 1. | ಖಾಲಿ ಟೆಂಡರ್ ಫಾರಂಗಳನ್ನು ಕೋರಿ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ | ದಿನಾಂಕ 26.10.2005 ಸಂಜೆ 5.30 ರವರೆಗೆ |
| 2. | ಖಾಲಿ ಟೆಂಡರ್ ಫಾರಂಗಳನ್ನು ಕೊಡುವ ದಿನಾಂಕ: | ದಿನಾಂಕ: 27.10.2005 ರಿಂದ 28.10.2005 ಸಂಜೆ 5.30 ರವರೆಗೆ |
| 3. | ತುಂಬಿದ ಟೆಂಡರ್‌ಗಳನ್ನು ಸ್ವೀಕರಿಸುವ ದಿನಾಂಕ: | 28.10.2005 ರಿಂದ 29.10.2005 ಸಂಜೆ 4.00 ರವರೆಗೆ |
| 4. | ಕೆಲಸವನ್ನು ನಿರ್ವಹಿಸುವ ಅವಧಿ | 30 ದಿವಸಗಳು (ಮಳೆಗಾಲ ಹಾಗೂ ಕಾಲುವೆಯಲ್ಲಿ ನೀರು ಹರಿಯುವ ಅವಧಿ ಹೊರತುಪಡಿಸಿ) |

| ಕ್ರಮ ಸಂಖ್ಯೆ | ಕೆಲಸದ ಹೆಸರು | ಟೆಂಡರ್‌ಗೆ ಇಡಲಾದ ಮೊತ್ತ | ಇ.ಎಂ.ಡಿ. | ಟೆಂಡರ್ ಫಾರಂ ಬೆಲೆ (ತೆರಿಗೆಗಳು ಪ್ರತ್ಯೇಕ) | ಗುತ್ತಿಗೆದಾರರ ದರ್ಜೆ |
|---|---|---|---|---|---|
| 1 | 2 | 3 | 4 | 5 | 6 |
| ಸಹಾಯಕ ಕಾರ್ಯಪಾಲಕ ಅಭಿಯಂತರು, ನಂ.1 ಬಿಆರ್‌ಎಲ್‌ಬಿಸಿ ಉಪ ವಿಭಾಗ ಬಿ.ಆರ್. ಪ್ರಾಜೆಕ್ಟ್ | | ರೂ. | ರೂ. | ರೂ. | |
| 1. | ಭದ್ರಾ ಬಲದಂಡೆ ಕಾಲುವೆಯ ಸರಪಳಿ 0.7 ಮತ್ತು 0.9ಕಿಮೀನಲ್ಲಿ ಕಟ್ಟಡ ಹಾಗೂ ಇರುವ ಏರಿಯನ್ನು ಬಲಪಡಿಸುವ ಕಾಮಗಾರಿ. | 4,90,041/- | 12,260/- | 500/- | ಮೂರನೆಯ ದರ್ಜೆ ಮತ್ತು ಮೇಲ್ಪಟ್ಟು |

| 1 | 2 | 3 | 4 | 5 | 6 |
|---|---|---|---|---|---|
| 2. | ಭದ್ರಾ ಡ್ಯಾಂನ ಎಡದಂಡೆ ಹಾಗೂ ಬಲದಂಡೆ ಸ್ಲೂಯಿಸ್ ಗೇಟ್ ನಂ.1 ಮತ್ತು 2ರಲ್ಲಿ ಗೈಡ್ ರೋಲರ್ಸ್ ಹಾಕುವ ಕಾಮಗಾರಿ. | 19,500/- | 4875/- | 300/- | ಮೂರನೆಯ ದರ್ಜೆ ಮತ್ತು ಮೇಲ್ಪಟ್ಟು |
| 3. | ಭದ್ರಾ ಡ್ಯಾಂನ ಬಲದಂಡೆ ಸ್ಲೂಯಿಸ್ ಗೇಟ್ 1ಕ್ಕೆ ಅಳವಡಿಸುವ ಕಾಮಗಾರಿ. | 1,38,542/- | 3465/- | 300/- | -”- |
| 4. | ಭದ್ರಾ ಡ್ಯಾಂನ 45 ಟನ್ ಹಾಗೂ 75 ಟನ್ ಸಾಮರ್ಥ್ಯದ ಗ್ಯಾಂಟ್ರಿ ಕ್ರೇನ್‌ಗೆ ಬಣ್ಣ ಬಳಿಯುವ ಕಾಮಗಾರಿ. | 4,88,697/- | 12220/- | 500/- | -”- |
| 5. | ಭದ್ರಾ ಎಡದಂಡೆ ಕಾಲುವೆಯ ಸರಪಳಿ 14.75 ಕಿಮೀ ಚಿಕ್ಕಗೊಪ್ಪೇನಹಳ್ಳಿ ಹತ್ತಿರ ಗಾಡಿಸೇತುವೆ ದುರಸ್ತಿ. | 3,89,919/- | 9750/- | 500/- | -”- |
| 6. | ಭದ್ರಾ ಎಡದಂಡೆ ಕಾಲುವೆಯ ಸರಪಳಿ 1.60 ಕಿಮೀನಲ್ಲಿರುವ ಲಾಂಗ್ ತ್ರೋಟೆಡ್ ಫ್ಲೂಮ್‌ವಾಲ್ ನಿರ್ಮಿಸುವುದು. ಸಹಾಯಕ ಕಾರ್ಯಪಾಲಕ ಅಭಿಯಂತರು ನಂ.2 ಬಿಆರ್‌ಆರ್‌ಬಿಸಿ ಉಪವಿಭಾಗ ಡಿ.ಬಿ. ಹಳ್ಳಿ. | 4,84,951/- | 12200/- | 500/- | -”- |
| 7. | ಭದ್ರಾ ಬಲದಂಡೆ ಕಾಲುವೆಯ ಸರಪಳಿ 61.80 ಕಿಮೀನಲ್ಲಿ ಬ್ರಿಡ್ಜ್ ಅಭಿವೃದ್ಧಿಪಡಿಸುವ ಕಾಮಗಾರಿ. | 3,90,793/- | 9775/- | 500/- | -”- |
| 8. | ಭದ್ರಾ ಬಲದಂಡೆ ಕಾಲುವೆಯ ಸರಪಳಿ 70.60 ಕಿಮೀನಲ್ಲಿ ಬ್ರಿಡ್ಜ್ ಅಭಿವೃದ್ಧಿಪಡಿಸುವ ಕಾಮಗಾರಿ. | 3,89,400/- | 9740/- | 500/- | -”- |
| 9. | ಭದ್ರಾ ಬಲದಂಡೆ ಕಾಲುವೆಯ ಸರಪಳಿ 75.50 ಕಿಮೀನಲ್ಲಿ ಬ್ರಿಡ್ಜ್ ಅಭಿವೃದ್ಧಿಪಡಿಸುವ ಕಾಮಗಾರಿ. | 3,89,413/- | 9740/- | 500/- | -”- |
| 10. | ಭದ್ರಾ ಬಲದಂಡೆ ಕಾಲುವೆಯ ಸರಪಳಿ 81.20 ಕಿಮೀನಲ್ಲಿ ಬ್ರಿಡ್ಜ್ ಅಭಿವೃದ್ಧಿಪಡಿಸುವ ಕಾಮಗಾರಿ. | 3,89,587/- | 9750/- | 500/- | -”- |
| 11. | ಭದ್ರಾ ಬಲದಂಡೆ ಕಾಲುವೆಯ ಸರಪಳಿ 92.20 ಕಿಮೀನಲ್ಲಿ ಬ್ರಿಡ್ಜ್ ಅಭಿವೃದ್ಧಿಪಡಿಸುವ ಕಾಮಗಾರಿ. | 3,88,283/- | 9725/- | 500/- | -”- |
| 12. | ಭದ್ರಾ ಬಲದಂಡೆ ಕಾಲುವೆಯ ಸರಪಳಿ 60.70 ಕಿಮೀನಲ್ಲಿ ಗಾಡಿಸೇತುವೆ ಅಭಿವೃದ್ಧಿಪಡಿಸುವ ಕಾಮಗಾರಿ. | 3,90,652/- | 9770/- | 500/- | -”- |
| 13. | ಭದ್ರಾ ಬಲದಂಡೆ ಕಾಲುವೆ ಸರಪಳಿ 64.80 ಕಿಮೀನಲ್ಲಿ ಮತ್ತು 66.90 ಕಿಮೀನಲ್ಲಿರುವ ರಿಲೀವಿಂಗ್ ವಿಯರ್ ಅಭಿವೃದ್ಧಿಪಡಿಸುವ ಕಾಮಗಾರಿ. | 3,90,716/- | 9770/- | 500/- | -”- |
| 14. | ಭದ್ರಾ ಬಲದಂಡೆ ಕಾಲುವೆ ಸರಪಳಿ 71.90, 74.70ನೇ ಕಿಮೀನಲ್ಲಿರುವ ರಿಲೀವಿಂಗ್ ವಿಯರ್ ಅಭಿವೃದ್ಧಿಪಡಿಸುವ ಕಾಮಗಾರಿ. | 3,91,847/- | 9800/- | 500/- | -”- |
| 15. | ಭದ್ರಾ ಬಲದಂಡೆ ಕಾಲುವೆಯ 20ನೇ ವಿತರಣಾ ನಾಲೆಯ ಹೆಡ್ ಸ್ಲೂಯಿಸ್ ಪುನರ್ ನಿರ್ಮಾಣ. | 4,78,011/- | 12000/- | 500/- | -”- |
| 16. | ಭದ್ರಾ ಬಲದಂಡೆ ಕಾಲುವೆಯ 22ನೇ ವಿತರಣಾ ನಾಲೆಯ ಸರಪಳಿ 7.10 ಕಿಮೀನಲ್ಲಿ ಬ್ರಿಡ್ಜ್ ನಿರ್ಮಿಸುವ ಕಾಮಗಾರಿ. | 3,90,740/- | 9770/- | 500/- | -”- |
| 17. | ಭದ್ರಾ ಬಲದಂಡೆ ಕಾಲುವೆಯ 26ನೇ ವಿರತಣಾ ನಾಲೆಯ ಹೆಡ್ ಸ್ಲೂಯಿಸ್ ಪುನರ್ ನಿರ್ಮಿಸುವುದು. | 4,95,236/- | 12385/- | 500/- | -”- |

**ಸೂಚನೆಗಳು:**

1) ಕಾಮಗಾರಿಯನ್ನು ನಿಗದಿತ ಕ್ಲೋಸರ್ ಅವಧಿಯಲ್ಲಿಯೇ ಪೂರ್ಣಗೊಳಿಸಬೇಕು ಹಾಗೂ ಕಾಮಗಾರಿಗೆ ಅಗತ್ಯವಿರುವ ಸಾಮಗ್ರಿ ಮತ್ತು ಯಂತ್ರೋಪಕರಣಗಳನ್ನು ಕ್ಲೋಸರ್ ಅವಧಿಯ ನೀರು ನಿಲ್ಲಿಸುವ ಮುಂಚೆಯೇ ಮುಂಗಡವಾಗಿ ವ್ಯವಸ್ಥೆ ಮಾಡಿಕೊಳ್ಳಬೇಕು.
2) ಕಾಮಗಾರಿಯನ್ನು ಪ್ರಾರಂಭಿಸುವ ಮುನ್ನ ಪ್ರೋಗ್ರಾಂ ಮತ್ತು ಪ್ರೋಗ್ರೆಸ್ ಪಟ್ಟಿಯನ್ನು ಲಗತ್ತಿಸುವುದು ಮತ್ತು ನಿಗದಿತ ಸಮಯದೊಳಗೆ ಮುಗಿಸತಕ್ಕದ್ದು.
3) ಟೆಂಡರ್ ಪ್ರಕಟಣೆಗಳಲ್ಲಿ ಪ್ರಕಟಿಸಿರುವ ಉಳಿದ ಷರತ್ತುಗಳಲ್ಲಿ ಯಾವುದೇ ಬದಲಾವಣೆಗಳು ಇರುವುದಿಲ್ಲ.

**ಎಸ್.ಹೆಚ್. ಮಂಜಪ್ಪ**
ಪಿ.ಆರ್.548 ಕಾರ್ಯಪಾಲಕ ಅಭಿಯಂತರು, ನಂ.4
ಬಿಆರ್‌ಎಲ್‌ಬಿಸಿ ವಿಭಾಗ, ಭದ್ರಾವತಿ.

**FORM NO.1**
**(SEE RULE-9)**
**DEPARTMENT OF POLICE**
**DISTRICT POLICE OFFICE, BELGUAM, DATED: 21ST SEPTEMBER, 2005**
**NOTIFICATION**

**Shri LAGAMAPPA BALAPPA MADIG C.P.C.B. No.2099** Working as CIVIL POLICE CONSTABLE in the POLICE Department of office of the CIVIL POLICE BELGAUM Is permitted to change his name to **LAGAMAPPA BALAPPA KOLYAGOL.**

PD-98 Superintendent of Police,
Belgaum.

**OFFICE OF THE EXECUTIVE ENGINEER, NO.2, C.N.N.L. DIVISION, HASSAN**
**TENDER FOR C.C. LINING AND EMBANKMENT, REGULATOR GATES**
**No. EE/CNNL/ DN2/ Hassan/ PB/ Tender/ Notification 2/ 05-06/ 565, Dated: 26th September, 2005**
**Cauvery Neeravary Nigam (A Govt. of Karnataka Enterprise)**
**Pre-qualification cum- E-Tender Notification No.2/ 2005-06, Dated: 26th September, 2005**

Manual or Electronic Tenders in the prescribed Form in two cover system for work Sl.No.1 and 2 Single Cover system for work Sl.No. 3 & 4, Details of Works (1) Balance Work of C.C. Lining from Ch.45000 M to 46000 M of H.L.B.C. (2) -do-Ch 44000M to 45000M of H.L.B.C. (3) Rising and Strengthening of Embankment in 32nd KM of H.L.B.C. (4) Improvements to cross regulator gate of tank at Ch37700M in 38th KM of H.L.B.C. (Mechanical Work). Approximate Estimated cost put to tender work in Sl.No.1, Rs.84.82 Lakhs, Sl.No.2, Rs.53.50 Lakhs Sl.No.3, Rs. 19.825 Lakhs, Sl.No.4, Rs.19,425/- Cost of Blank Tender Documents Rs. 5,000/- (common). Registered Class of Contractors Class-I in P.W.D. and C.N.N.L. Enrollment (common to all) Period of completion 9 months for works under Sl.No. 1 and 2, Six Months for Sl.No.3 and 4.

Training E-Tendering on 11.30 A.M. on 20.10.2005. The Contractor should mention whether they want manual tendering or E-Tendering and get user I.D. in the Dn. Prior to 24.10.2005, Last date for receipt of Application for Blank Tender Documents is up to 5.00 PM on 28.10.2005. Blank Tender Papers will be issued on 07.11.2005 upto 5.00 PM. Receipt of completed Tender documents in Dn. on 11.11.2005 upto 4.00 PM for both manual and E-Tendering. The opening of the Tenders 4.30 PM on 11.11.2005 for Sl.No.1 and 2, for Sl.No.3 and 4 on 15.11.2005. The information can be had from the Website "www. Tenderwizard.com/CNNL.

For Other details and conditions are available in the office of the Executive Engineer during office hours.

PD-107 Executive Engineer, No.2, C.N.N.L.
Dn. Belur. District Hassan.

**IN THE COURT OF ADDL.CITY CIVIL JUDGE AT MAYO HALL, BANGALORE**
**G & W.C.NO. 15014/2005**

**Petitioner:** Sri Puttaraju S/o Krishnappa,
Aged about 45 Years, R/at No.703, Ist Main,
4th Cross, Domlur Layout, Bangalore-71.

**AND**

**Respondent:** NIL

**PUBLIC NOTICE**

Whereas the Petitioner above named filed a petition under section 7 & 10 of the Guardians and Wards Act 1890 for declaring him the guardian of minor children by name Arun S/o K. Nagaraj, aged about 13 years, N. Vidhya D/o K. Nagaraj, aged about 9 years and claiming benefits of K. Nagaraj on behalf of minor children whose father deposited the amount in R.D. Account in postal department, Bangalore.

Anybody having any interest in upon the said claim or minor children or any objection for grant of above relief by the Hon'ble Court may appear before Hon'ble Court (CCH 21) on Dated: **09.11.2005** in person or through a pleader, failing which the above case will be heard and determined in accordance with law. Given under my hand and seal dated the 28.09.2005.

PD-108 BY THE ORDER OF COURT
Assistant Registrar, City Civil
Court, Mayo Hall, Bangalore.